22

॥ ಶ್ರೀಃ ॥
॥ ಶ್ರೀಮತೇ ರಾಮಾನುಜಾಯ ನಮಃ ॥



ಶ್ರೀಮತ್ ಪಿಳ್ಳೈ ಲೋಕಾಚಾರ್ಯರು ಅನುಗ್ರಹಿಸಿರುವ

# ಅರ್ಥಪಂಚಕಮ್
# ಪ್ರಮೇಯಶೇಖರಮ್
# ಸಂಸಾರ ಸಾಮ್ರಾಜ್ಯಂ
# ನವರತ್ನಮಾಲೈ

ಶ್ರೀಮತಿ ವಿದುಷಿ ರಮಾಶ್ರೀನಿವಾಸನ್
ಬಿ.ಎಸ್ಸಿ., ಎಂ.ಎ. (ಕನ್ನಡ) ಎಂ.ಎ. (ಸಂಸ್ಕೃತ)

ಪ್ರಕಾಶಕರು :
ಶ್ರೀವೈಷ್ಣವಶ್ರೀ
ನಂ. 7, 6-ಎ ಮೈನ್ ರೋಡ್, ಮಾರುತಿ ಎಕ್ಸ್‌ಟೆನ್‌ಷನ್
ಬೆಂಗಳೂರು-560 021. ದೂರವಾಣಿ : 3320572

॥ ಶ್ರೀಃ ॥

॥ ಶ್ರೀಮತೇ ರಾಮಾನುಜಾಯ ನಮಃ ॥

    

ಶ್ರೀಮತ್ ಪಿಳ್ಳೈ ಲೋಕಾಚಾರ್ಯರು ಅನುಗ್ರಹಿಸಿರುವ

# ಅರ್ಥಪಂಚಕಮ್

# ಪ್ರಮೇಯಶೇಖರಮ್

# ಸಂಸಾರ ಸಾಮ್ರಾಜ್ಯಂ

# ನವರತ್ನಮಾಲೈ

ಶ್ರೀಮತಿ ವಿದುಷಿ ರಮಾಶ್ರೀನಿವಾಸನ್

ಬಿ.ಎಸ್ಸಿ., ಎಂ.ಎ. (ಕನ್ನಡ) ಎಂ.ಎ. (ಸಂಸ್ಕೃತ)

ಪ್ರಕಾಶಕರು :

ಶ್ರೀವೈಷ್ಣವಶ್ರೀ

ನಂ. 7, 6-ಎ ಮೈನ್ ರೋಡ್, ಮಾರುತಿ ಎಕ್ಸ್‌ಟೆನ್‌ಷನ್

ಬೆಂಗಳೂರು-560 021. ದೂರವಾಣಿ : 3320572

ARTHA PANCHAKAM, PRAMEYA SHEKHARAM, SAMSARA SAMRAJYAM, NAVARATHNAMALAI, SWAMI PILLAI LOKACHARYAR – A Text by Swamy Pillai Lokacharya with Kannada Translation and Commentary by Smt. Ramasrinivasan

Published by 'SRIVAISHNASRI'
6th 'A' Main Road
Maruthi Extension
Bangalore-560 021

P.P. vi + 78

First Edition – 2002

No. of Copies – 1000

Price : 60/-



Print :
Cosmic Creations
Bangalore.
Tel : 3325991. email : cosmiccr@vsnl.com

॥ ಶ್ರೀಃ ॥

॥ ಶ್ರೀಮತೇ ರಾಮಾನುಜಾಯ ನಮಃ ॥

ಶ್ರಿಯಃಪತಿಯಾಗಿ ಸಮಸ್ತ ಕಲ್ಯಾಣೈಕತಾನನಾದ ಪರಮಾತ್ಮನ ನಿರ್ಹೇತುಕ ಕೃಪೆಗೆ ಪಾತ್ರರಾಗಿ ಭಕ್ತಿರೂಪಾಪನ್ನಜ್ಞಾನವನ್ನು ಪಡೆದವರು ಆಳ್ವಾರ್‌ಗಳು. ಅವರ ಭಗವದನುಭವ ಪರೀವಾಹರೂಪವಾಗಿ ಪ್ರವಹಿಸಿದ ದಿವ್ಯಪ್ರಬಂಧಗಳ ಪ್ರಕಾಶದಿಂದ ನಿರ್ಮಲ ಜ್ಞಾನ ಪಡೆದವರೇ ಆಚಾರ್ಯರುಗಳು. ಭಗವದ್ರಾಮಾನುಜಾರ್ಯರಿಂದ ಅನುಗ್ರಹೀತವಾದ ಈ ದಿವ್ಯ ಆಚಾರ್ಯಪರಂಪರೆಯ ಪ್ರಕಾಶಮಾನವಾದ ದಿವ್ಯ ತಾರೆ ಸ್ವಾಮಿ ಪಿಳ್ಳೈ ಲೋಕಾಚಾರ್ಯರು. 108 ರಹಸ್ಯ ಗ್ರಂಥಗಳನ್ನು ರಚಿಸಿ ಉಪಕರಿಸಿದ ಮಹಾನುಭಾವರು. 'ಅಷ್ಟಾದಶ ರಹಸ್ಯಂಗಳ್' ಎಂಬುದಾಗಿ ಹದಿನೆಂಟು ರಹಸ್ಯ ಗ್ರಂಥಗಳು ಅದರಲ್ಲಿ ಪ್ರಸಿದ್ಧವಾಗಿವೆ. ವೇದ, ಇತಿಹಾಸ, ಪುರಾಣ, ದಿವ್ಯಪ್ರಬಂಧಗಳಲ್ಲಿ ಅಡಗಿರುವ ಅಪೂರ್ವವಾದ, ರಹಸ್ಯವಾದ ಅರ್ಥವನ್ನು ಸಕಲರೂ ಅರಿಯುವಂತೆ ಸೂತ್ರ ರೂಪದಲ್ಲಿ ಹದಿನೆಂಟು ರಹಸ್ಯ ಗ್ರಂಥಗಳಾಗಿ ರಚಿಸಲಾಗಿದೆ.

ಈ ಅಷ್ಟಾದಶ ರಹಸ್ಯಗಳಲ್ಲಿ ಆತ್ಮೋಜ್ಜೀವನಕರವಾಗಿ ಪರಮ ಉಪಾದೇಯವಾಗಿರುವ ರಹಸ್ಯಗಳೇ ಅರ್ಥಪಂಚಕಮ್, ಪ್ರಮೇಯಶೇಖರಮ್, ಸಂಸಾರಸಾಮ್ರಾಜ್ಯಂ, ನವರತ್ನಮಾಲೈ.

ಇಂತಹ ಅಪೂರ್ವವಾದ ರಹಸ್ಯಗ್ರಂಥ ಪ್ರತಿಪಾದ್ಯವಾದ ವಿಷಯಗಳು ಎಲ್ಲ ಕನ್ನಡ ವಾಚಕರಿಗೂ ಲಭ್ಯವಾಗಬೇಕೆಂಬ ಸದುದ್ದೇಶದಿಂದ, ಕನ್ನಡ ಅನುವಾದ ಮತ್ತು ವ್ಯಾಖ್ಯಾನಗಳೊಡನೆ ಈ ಗ್ರಂಥವನ್ನು ರಚಿಸಲಾಯಿತು. ಈ ಗ್ರಂಥ ರಚನಾ ಕೈಂಕರ್ಯವು ಸಾರ್ಥಕವಾಗುವಂತೆ, ಇದರ ಪ್ರಯೋಜನ ಎಲ್ಲರಿಗೂ ಲಭಿಸುವಂತಾಗಬೇಕೆಂಬ ಪರಮೋಪಕಾರ ಶುಭ ಸಂಕಲ್ಪದಿಂದ ಉದಾರವಾಗಿ ಧನ ಸಹಾಯ ನೀಡಿ ಪುಸ್ತಕ ಪ್ರಕಟಣೆಗೆ ಕಾರಣರಾದವರು ಶ್ರೀ ಉ॥ ವೇ॥ ಮಣಿಕರ್ಣಿಕೆ ಶ್ರೀನಿವಾಸನ್ ಹಾಗೂ ಅವರ ಧರ್ಮಪತ್ನಿಯವರಾದ ಕಮಲಮ್ಮನವರ ಮಕ್ಕಳು ಇವರು ಪೂಜ್ಯ ಮಾತಾಪಿತೃಗಳಾದ ಶ್ರೀ ಉ॥ ವೇ॥ ಮಣಿಕರ್ಣಿಕೆ ಶ್ರೀನಿವಾಸನ್ ಹಾಗೂ ಅವರ ಧರ್ಮಪತ್ನಿಯವರಾದ ಕಮಲಮ್ಮನವರ ಸ್ಮರಣಾರ್ಥ ಈ ಗ್ರಂಥವನ್ನು ಪ್ರಕಟಿಸಿದ್ದಾರೆ. ತಮ್ಮ ಉದಾರವಾದ ಧನ ಸಹಾಯದಿಂದ ಇಂತಹ ಲೋಕೋಪಕಾರ ಕಾರ್ಯವನ್ನೂ, ಮಾತಾಪಿತೃ ಆಚಾರ್ಯ ಕೈಂಕರ್ಯವನ್ನು ನೆರವೇರಿಸುವ ಇವರ ಕುಟುಂಬಕ್ಕೆ

ಆ ಭಗವಂತನು ನಿತ್ಯಾನುಗ್ರಹ ಮಾಡಲಿ ಎಂದು ಪ್ರಾರ್ಥಿಸುತ್ತಾ ನಮ್ಮ ಗೌರವಪೂರ್ವಕ ಪ್ರಣಾಮಗಳನ್ನು ಸಮರ್ಪಿಸುತ್ತೇನೆ. ಈ ರೀತಿಯಾದ ಪುಸ್ತಕವು ಪ್ರಕಟವಾಗುತ್ತಿರುವ ವಿಷಯ ತಿಳಿದಕೂಡಲೇ ಮನೆಗೆ ಆಗಮಿಸಿ 1000/- ರೂ.ಗಳ ಸಹಾಯಧನವನ್ನು ನೀಡಿದ ಶ್ರೀ ವಿ.ಪಿ. ಮೈಥಿಲಿ ಶೇಷಾದ್ರಿ, ಅಯ್ಯಂಗಾರ್‌ರವರಿಗೆ ಭಗವಂತನು ಸಕಲ ಸೌಭಾಗ್ಯವನ್ನೂ ನೀಡಲಿ ಎಂದು ಪ್ರಾರ್ಥಿಸುತ್ತೇವೆ.

ತಿರುಮಲ ತಿರುಪತಿ ದೇವಸ್ಥಾನದ ವತಿಯಿಂದ 1954ರಲ್ಲಿ ಪ್ರಕಟಿತವಾದ, ಶ್ರೀ ಉ|| ವೇ|| ಸಾಹಿತ್ಯ ವೇದಾಂತನ್ಯಾಯ ಶಿರೋಮಣಿ ಸುದರ್ಶನಾಚಾರ್ಯ ಸ್ವಾಮಿಗಳಿಂದ ಪರಿಶೋಧಿಸಿ ಸಂಪಾದಿಸಲ್ಪಟ್ಟ 'ಅಷ್ಟಾದಶ ರಹಸ್ಯಂಗಳ್' ಎಂಬ ಗ್ರಂಥದಿಂದ ಈ ಗ್ರಂಥದ ಶುದ್ಧ ಪಾಠ, ಪ್ರಮಾಣತಿರಟ್ಟು ಇತ್ಯಾದಿಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಟಿ.ಟಿ.ಡಿ. ಹಾಗೂ ಶ್ರೀ ಉ|| ವೇ|| ಸುದರ್ಶನಾಚಾರ್ಯರವರಿಗೂ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ಈ ಗ್ರಂಥ ಕಾಲಕ್ಷೇಪವನ್ನು ಅಡಿಯೇನಳಿಗೆ ಅನುಗ್ರಹಿಸಿ ವ್ಯಾಖ್ಯಾನ ಬರೆಯುವಾಗ ಏರ್ಪಟ್ಟ ಸಂದೇಹಗಳನ್ನೆಲ್ಲಾ ನಿವಾರಣೆ ಮಾಡಿ, ಈ ಗ್ರಂಥ ಪರಿಚಯ ಲೇಖನವನ್ನೂ ನೀಡಿದಂತಹ ಗುರುಗಳಾದ ಪೂಜ್ಯ ಶ್ರೀ ಉ|| ವೇ|| ಅರೈಯರ್ ಶ್ರೀರಾಮಶರ್ಮ, ನಿವೃತ್ತ ಪ್ರಾಂಶುಪಾಲರು, ಸಂಸ್ಕೃತ ಪಾಠಶಾಲಾ, ಮೇಲುಕೋಟೆ ಇವರ ಚರಣಗಳಲ್ಲಿ ಅಡಿಯೇನಳ ಭಕ್ತಿಪೂರ್ವಕ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥ ರಚನೆಗೆ ಸಹಕರಿಸಿದ ಎಲ್ಲ ಮಹನೀಯರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀನಿಧಿ ಪ್ರಿಂಟರ್ಸ್‌ರವರಿಗೂ ಹೃತ್ಪೂರ್ವಕ ಧನ್ಯವಾದಗಳು.

ಅಡಿಯೇನ್

ದಿ|| 1-1-2003 ರಮಾಶ್ರೀನಿವಾಸನ್

# ಮುನ್ನುಡಿ

ವೇದಾಂತಾರ್ಥಗಳ ನಿಗೂಢ ರಹಸ್ಯ ವಿಷಯಗಳನ್ನು ಯಾವ ಶಂಕೆಗೂ ಅವಕಾಶವಾಗದಂತೆ ಸರಳ ಸುಲಭ ತಮಿಳು ಸಂಸ್ಕೃತ ಮಿಶ್ರ ಮಣಿಪ್ರವಾಳ ಭಾಷೆಯಲ್ಲಿ ಸಾರ್ವಜನಿಕರಿಗೆ ಸುಲಿದ ಬಾಳೆಯಹಣ್ಣಿನಂತೆ ರಸಮಯವಾದ ತಮ್ಮ ಮಾತಿನ ಶೈಲಿಯ ಜೇನು ಸವರಿಕೊಡುವಂತಹ ಮಹಾತ್ಮರು ಶ್ರೀ ಸ್ವಾಮಿ ಪಿಳ್ಳೈ ಲೋಕಾಚಾರ್ಯರು.

ಕನ್ನಡಿಗರಿಗೆ ಸೂತ್ರವಚನರೂಪವಾದ ಇದು ಕನ್ನಡ ಲಿಪಿಯಲ್ಲೂ ಅನುವಾದ ದೊಡನೆ ದೊರಕುತ್ತಿರುವುದು ಶ್ರೀ ರಮಾ ಶ್ರೀನಿವಾಸನ್ ಅವರ ಸಾಮೂಹಿಕ ಪ್ರಯತ್ನದಿಂದ.

ಅರ್ಥಪಂಚಕವನ್ನು ವಿಸ್ತಾರವಾಗಿ ನಡುಗನ್ನಡ ಪದ್ಯಗಳಲ್ಲಿ ನಾನೂರು ವರ್ಷಗಳ ಹಿಂದೆಯೇ ಮೈಸೂರರಸರ ಗುರುಗಳಾಗಿದ್ದ ಚಿಕ್ಕುಪಾಧ್ಯಾಯರೆಂಬ ಲಕ್ಷ್ಮೀಪತಿ ಪಂಡಿತರು ಅನುವಾದಿಸಿದ್ದಾರೆ. ಮೈಸೂರು ಪಂಚಾಂಗಕರ್ತರಾದ ಅರಮನೆ ಧರ್ಮಾಧಿಕಾರಿ ಎಸ್.ಎನ್. ಕೃಷ್ಣಜೋಯಿಸರು ಇದನ್ನು ತಮ್ಮ ಗದ್ಯಾನುವಾದದೊಡನೆ ಪ್ರಕಾಶಪಡಿಸಿದ್ದಾರೆ. ಇದರ ಪ್ರತಿಗಳು ಈಗ ಸಿಗುತ್ತಿಲ್ಲ.

ಸಂಸಾರಸಾಮ್ರಾಜ್ಯ, ಪ್ರಮೇಯಶೇಖರ, ನವರತ್ನಮಾಲೆ ಈ ಮೂರು ಈವರೆಗೆ ಕನ್ನಡ ಅನುವಾದ ಆಗಿರುವುದಾಗಿ ನಮಗೆ ತಿಳಿದುಬಂದಿಲ್ಲ. ಈಗ ಈ ಮೇಲಿನ ನಾಲ್ಕು ಚಿಕ್ಕ ಚೊಕ್ಕ ರಹಸ್ಯ ಗ್ರಂಥಗಳು ಕನ್ನಡಿಗರ ಕೈಗೆ ಸೇರುತ್ತಿರುವುದು ಒಂದು ಭಾಗ್ಯ. 'ಅರ್ಚಿರಾದಿ' ಎಂಬ ರಹಸ್ಯವನ್ನು ಮೇಲುಕೋಟೆಯ ಅರೆಯರ್ ಸ್ವಾಮಿಯವರು ವಿಸ್ತಾರವಾಗಿ ವ್ಯಾಖ್ಯಾನಿಸಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಇದು ಮುದ್ರಿತವಾಗಿಲ್ಲ.

ತತ್ತ್ವತ್ರಯ, ಮುಮುಕ್ಷುಪ್ಪಡಿಗಳು ಈಗಾಗಲೇ ರಮಾ ಶ್ರೀನಿವಾಸನ್ ಅವರಿಂದ ಕನ್ನಡ ವ್ಯಾಖ್ಯಾನ ಸಹಿತ ಪ್ರಕಟವಾಗಿವೆ. ವೇದಾಂತ ರಹಸ್ಯಗಳಲ್ಲಿ ಅಭಿರುಚಿ ಇರುವಂತಹ ಸಜ್ಜನರಿಗೆ ಇದೆಲ್ಲವೂ ಜ್ಞಾನರಸಾನುಭವಕ್ಕೆ ಒಂದು ಅವಕಾಶ.

ಇಂತು ವಿಜ್ಞಾಪಕ
ಅರೆಯರ್ ಶ್ರೀರಾಮಶರ್ಮ
'ಜಾನಕೀರಾಮ ನಿಲಯ', ನಂ. 10, ಸೀರೂರು ಪಾರ್ಕ್ ರಸ್ತೆ
ಮಲ್ಲೇಶ್ವರಂ, ಬೆಂಗಳೂರು
24-12-2002

# ವಿಷಯ ಸೂಚಿ



ಆರ್ಥಿಕ ನೆರವು

ಶ್ರೀ ಉ|| ವೇ|| ಮಣ ಕರ್ಣಕೆ ಶ್ರೀನಿವಾಸನ್ ಹಾಗೂ

ಅವರ ಧರ್ಮಪತ್ನಿಯವರಾದ ಕಮಲಮ್ಮನವರ ಮಕ್ಕಳು

ಮತ್ತು

ಶ್ರೀಮತಿ ಮೈಥಿಲಿ ಶೇಷಾದ್ರಿ, ಐಯ್ಯಂಗಾರ್

|| ಶ್ರೀ ||

|| ಶ್ರೀಮತೇ ರಾಮಾನುಜಾಯ ನಮಃ ||

|| ಸ್ವಾಮಿ ಪಿಳ್ಳೈಲೋಕಾಚಾರ್ಯರ್ ತಿರುವಡಿಹಳೇ ಶರಣಂ ||

|| ಜೀಯರ್ ತಿರುವಡಿಹಳೇ ಶರಣಂ ||

# ತತ್ತ್ವತ್ರಯಾರ್ಥ ವಿವರಣ ರಹಸ್ಯಗಳು

# ಅರ್ಥ ಪಂಚಕಮ್

ಮೂಲ: ಸಂಸಾರಿಯಾನ ಚೇತನನುಕ್ಕು ತತ್ತ್ವಜ್ಞಾನಂ ಪಿರನ್ದು ಉಜ್ಜೀವಿಕ್ಕು ಮ್ಪೋದು ಅರ್ಥಪಂಚಕಜ್ಞಾನಂ ಉಣ್ಡಾಹವೇಣುಮ್.

ಸಂಸಾರಿಯಾದ ಚೇತನನಿಗೆ ತತ್ವಜ್ಞಾನವೇರ್ಪಟ್ಟು ಉಜ್ಜೀವಿಸುವ ವೇಳೆಯಲ್ಲಿ ಅರ್ಥಪಂಚಕಜ್ಞಾನವು ಉಂಟಾಗಬೇಕು.

ಮೂಲ: ಅರ್ಥಪಂಚಕಮಾವದು-ಸ್ವಸ್ವರೂಪ, ಪರಸ್ವರೂಪ, ಪುರುಷಾರ್ಥ ಸ್ವರೂಪ ಉಪಾಯಸ್ವರೂಪ, ವಿರೋಧಿಸ್ವರೂಪಂಗಳೈ ಉಳ್ಳಪಡಿ ಅರಿಹೈ.

ಅರ್ಥಪಂಚಕವೆಂದರೆ : ಸ್ವಸ್ವರೂಪ, ಪರಸ್ವರೂಪ, ಪುರುಷಾರ್ಥ ಸ್ವರೂಪ, ಉಪಾಯ, ವಿರೋಧಿ ಸ್ವರೂಪಗಳನ್ನು ಯಥಾರ್ಥವಾಗಿ ಅರಿಯುವಿಕೆ.

ಮೂಲ: ಇವತ್ತಿಲ್ ಓರೋರು ವಿಷಯಂತಾನ್ ಅಞ್ಜುಪಡಿಪಟ್ಟಿರುಕ್ಕುಂ .

ಇವುಗಳಲ್ಲಿ ಒಂದೊಂದು ವಿಷಯವೂ ಐದೈದು ಬಗೆಯಾಗಿರುವುದು. ಈ ಅರ್ಥಪಂಚಕವನ್ನು ಮುಂದಿನ ಸೂತ್ರದಿಂದ ಒಂದೊಂದಾಗಿ ವಿವರಿಸುತ್ತಾರೆ.

ಮೂಲ: ಸ್ವಸ್ವರೂಪಮೆನ್ಗಿರದು - ಆತ್ಮಸ್ವರೂಪತ್ತೈ

ಸ್ವಸ್ವರೂಪವೆಂದರೆ - ಜೀವಾತ್ಮಸ್ವರೂಪ.

ಮೂಲ: ಆತ್ಮಸ್ವರೂಪಂತಾನ್ - ನಿತ್ಯರ್, ಮುಕ್ತರ್, ಬದ್ಧರ್, ಕೇವಲರ್, ಮುಮುಕ್ಷುಕ್ಕಳ್ ಎನ್ರು ಐನ್ದು.

ಈ ಆತ್ಮಸ್ವರೂಪವು ಐದು ವಿಧವಾಗಿರುತ್ತದೆ. ಅವು ಯಾವುವೆಂದರೆ ನಿತ್ಯರು, ಮುಕ್ತರು, ಬದ್ಧರು, ಕೇವಲರು ಮತ್ತು ಮುಮುಕ್ಷುಗಳು ಎಂಬುದಾಗಿದೆ.

ಮೂಲ: ಪರಸ್ವರೂಪಮೆನ್ಗಿರದು - ಈಶ್ವರಸ್ವರೂಪತ್ತೈ.

ಪರಸ್ವರೂಪವೆಂದರೆ - ಪರಮಾತ್ಮನ ಸ್ವರೂಪ.

ಮೂಲ: ಈಶ್ವರಸ್ವರೂಪಂತಾನ್-ಪರತ್ವಂ, ವ್ಯೂಹಂ, ವಿಭವಂ, ಅನ್ತರ್ಯಾಮಿತ್ವಂ, ಅರ್ಚಾವತಾರಂ ಎನ್ರು ಐನ್ದು.

ಈಶ್ವರ (ಪರಮಾತ್ಮ) ಸ್ವರೂಪವು ಪರತ್ವ, ವ್ಯೂಹ, ವಿಭವ, ಅನ್ತರ್ಯಾಮಿತ್ವ, ಅರ್ಚಾವತಾರ ಎಂಬುದಾಗಿ ಐದು ವಿಧವಾಗಿರುತ್ತದೆ.

ಮೂಲ: ಪುರುಷಾರ್ಥ ಸ್ವರೂಪಮೆನ್ಗಿರದು - ಪುರುಷನಾಲೇ ಅರ್ಥಿಕ್ಕಪ್ಪಡುಮದು - ಪುರುಷಾರ್ಥಂ.

ಪುರುಷಾರ್ಥ ಸ್ವರೂಪವೆಂದರೆ - ಪುರುಷನಿಂದ ಅರ್ಥಿಸಲ್ಪಡುವುದು ಎಂದರೆ ಇಚ್ಛಿಸಲ್ಪಡುವುದೇ ಪುರುಷಾರ್ಥ.

ಮೂಲ: ಅನ್ದಪುರುಷಾರ್ಥಂತಾನ್ -ಧರ್ಮ, ಅರ್ಥ, ಕಾಮ, ಆತ್ಮಾನುಭವ, ಭಗವದನುಭವಂ ಎನ್ರು ಐನ್ದು.

ಆ ಪುರುಷಾರ್ಥವು - ಧರ್ಮ, ಅರ್ಥ, ಕಾಮ, ಆತ್ಮಾನುಭವ, ಭಗವದನುಭವಗಳೆಂಬಂತೆ ಐದು.

ಮೂಲ: ಉಪಾಯಸ್ವರೂಪಮೆನ್ಗಿರದು - ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ ಆಚಾರ್ಯಾಭಿಮಾನಮೆನ್ರು ಐನ್ದು.

ಉಪಾಯವೆಂದರೆ - ಮಾರ್ಗ, ಪ್ರಾಪಕ, ಸಾಧನ ಎಂದರ್ಥ. ಈ ಉಪಾಯವು ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ಪ್ರಪತ್ತಿ ಆಚಾರ್ಯಾಭಿಮಾನಗಳೆಂದು ಐದು ವಿಧವಾಗಿದೆ.

ಮೂಲ: ವಿರೋಧಿಸ್ವರೂಪಮೆನ್ಗಿರದು - ಸ್ವರೂಪವಿರೋಧಿ, ಪರತ್ವವಿರೋಧಿ, ಪುರುಷಾರ್ಥವಿರೋಧಿ, ಉಪಾಯವಿರೋಧಿ, ಪ್ರಾಪ್ತಿವಿರೋಧಿ ಎನ್ರು, ಐನ್ದು.

ವಿರೋಧಿ ಸ್ವರೂಪವೆಂದರೆ - ಇಚ್ಛಿಸಿದ್ದನ್ನು ಪಡೆಯುವುದಕ್ಕೆ ಇರುವ ಅಡಚಣೆಗಳು. ಇದು ಸ್ವರೂಪವಿರೋಧಿ, ಪರತ್ವವಿರೋಧಿ, ಪುರುಷಾರ್ಥವಿರೋಧಿ, ಉಪಾಯವಿರೋಧಿ, ಪ್ರಾಪ್ತಿವಿರೋಧಿ, ಎಂಬುದಾಗಿ ಐದು ವಿಧಗಳಾಗಿವೆ.

॥ ಪೀಠಿಕಾ ಭಾಗಂ ಸಂಪೂರ್ಣಂ ॥

## ಜೀವಸ್ವರೂಪ ನಿರೂಪಣ ಪ್ರಕರಣಮ್

ಅರ್ಥಪಂಚಕದಲ್ಲಿ ಮೊಟ್ಟಮೊದಲು ಅರಿಯಬೇಕಾದ ಜೀವಾತ್ಮಸ್ವರೂಪದ ಐದು ಪ್ರಕಾರಗಳನ್ನು ಈ ಪ್ರಕರಣದಲ್ಲಿ ನಿರೂಪಿಸುತ್ತಾರೆ.

ಮೂಲ: ಇವತ್ತಿಲ್ ನಿತ್ಯರಾವಾರ್ - ಒರುನಾಳುಂ ಸಂಸಾರಬಂಧಮಾಹಿರ ಅವದ್ಯಮಿನ್ರಿಕ್ಕೇ ನಿರವದ್ಯರಾಯ್ ಭಗವದನುಭವ -ಆನುಕೂಲ್ಯೈಕ ಭೋಗರಾಯ್ 'ವಾನಿಳವರಶುವೈಹುನ್ದಕುಟ್ಟನ್ ವಾಸುದೇವನ್' ಎನ್ಗಿರ ಶ್ರೀವೈಕುಂಠನಾಥನುಕ್ಕು 'ವಿಣ್ಣಾಟ್ಟುವರ್ ಮೂದುವರ್' ಎನ್ಗಿರಪಡಿಯೇ ಪಟ್ಟಂ ಕಟ್ಟುಹೈಕ್ಕುಉರಿಯರಾಮ್ಪಡಿ ಮೂಪ್ಪರಾನ ಮಂತ್ರಿಹಳಾಯ್, ಈಶ್ವರ ನಿಯೋಗಾತ್ ಸೃಷ್ಟಿ, ಸ್ಥಿತಿ, ಸಂಹಾರಂಗಳೈ ಪಣ್ಣವುಂ ಶಕ್ತರಾಯ್ ಪರವ್ಯೂಹಾದಿ ಸರ್ವಾವಸ್ಥೈಹಳಿಲುಂ

ತೊಡರ್‌ನ್ದು ಅಡಿಮೈತೆಯ್ಯಕ್ಕಡವರಾಯ್, ಕೋಯಿಲ್‌ಹಳ್ - ದೈವಂಗಳಾನ ಸೇನ್ನೈಮುದಲಿಯಾರ್ ತೊಡಕ್ಕವಾನ - ಅಮರರ್‌ಹಳ್.

ಜೀವಾತ್ಮಸ್ವರೂಪು ಐದು ವಿಧವಾಗಿವೆ ಎಂದು ತಿಳಿಸಿದಂತೆ ಆದರಲ್ಲಿ ಮೊದಲು ಹೇಳಲ್ಪಟ್ಟ 'ನಿತ್ಯರು' ಎಂದರೆ ಯಾರು, ಅವರ ಸ್ವರೂಪ, ಸ್ವಭಾವಗಳು ಯಾವ ಪ್ರಕಾರವಾಗಿದೆ ಎಂಬುದನ್ನು ಈ ಸೂತ್ರದಲ್ಲಿ ವಿವರಿಸಲಾಗಿದೆ.

(ಇವತ್ತಿಲ್ ..... ನಿರವದ್ಯರಾಯ್) - ನಿತ್ಯರೆಂದರೆ - ಒಂದು ದಿನವೂ ಸಂಸಾರಸಂಬಂಧವೆಂಬ ದೋಷವಿಲ್ಲದೆ ನಿತ್ಯವಾಗಿ ಸಂಸಾರ ಗಂಧರಾಹಿತ್ಯದಿಂದ ಪರಿಶುದ್ಧರಾಗಿರುವವರು. ಎಂದರೆ ಪುಣ್ಯಪಾಪ ರೂಪವಾದ ಕರ್ಮವೆಂಬ ಕಶ್ಮಲದಿಂದ ಕೂಡಿ ಆದರ ಪರಿಣಾಮವಾಗಿ ಸಂಸಾರಮಂಡಲದಲ್ಲಿ ವಿವಿಧ ದೇಹಗಳನ್ನು ಪಡೆದು ಹುಟ್ಟು, ಸಾವು, ಜರಾ, ವ್ಯಾಧಿ, ಇತ್ಯಾದಿಗಳಿಗೆ ಒಳಗಾಗದೆ ನಿತ್ಯವೂ ಇಂತಹ ದೋಷಗಳೊಂದೂ ಇರದೆ ಪರಿಶುದ್ಧರಾಗಿರುವವರು.

(ಭಗವದನುಭವ ..... ಭೋಗರಾಯ್) - ಭಗವಂತನಿಗೆ ಅನುಕೂಲರಾಗಿರುವುದನ್ನೇ ಭೋಗವಾಗಿ ಉಳ್ಳವರಾಗಿರುವಂತಹ

(ವಾನಿಳ ..... ಮಂತ್ರಿಹಳಾಯ್) - ಪರಮಪದನಾಥನಾದ (ವಾಸುದೇವನೇ) ಪರಮಾತ್ಮನೇ ಯುವರಾಜನಾಗಿ 'ವಿಣ್ಣಾಟ್ಟುಮ್‌ಮೂದುವರ್' ಎಂಬಂತೆ ಅಲ್ಲಿನ ನಿತ್ಯರೇ ಹಿರಿಯರಾಗಿ, ಪ್ರಧಾನವಾಗಿ ಶ್ರೀವೈಕುಂಠನಾಥನಿಗೇ ಪಟ್ಟಕಟ್ಟುವುದಕ್ಕೆ ಅರ್ಹರಾಗುವಂತಹ ವೃದ್ಧ ಮಂತ್ರಿಗಳಾಗಿ;

(ಈಶ್ವರ ..... ಶಕ್ತರಾಯ್) - ಪರಮಾತ್ಮನು ನಿಯಮಿಸಿದರೆ, ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುವುದಕ್ಕೆ ಶಕ್ತರಾಗಿ

(ವ್ಯೂಹಾದಿ ..... ಶೆಯ್ಯಕ್ಕಡವರಾಯ್) - ಪರವ್ಯೂಹ, ವಿಭವ ಅಂತರ್ಯಾಮಿ, ಅರ್ಚಾ ಎಂಬ ಪರಮಾತ್ಮನ ಎಲ್ಲ ಅವಸ್ಥೆಗಳಲ್ಲೂ ಎಡಬಿಡದೆ ನಿರಂತರ ಕೈಂಕರ್ಯಮಾಡುವವರಾಗಿ.

(ಕೋಯಿಲ್‌ಹಳ್ ..... ಅಮರರ್‌ಹಳ್) - ಕ್ಷೇತ್ರಪಾಲರು, ಭವನ ರಕ್ಷಕರು, ದ್ವಾರ ರಕ್ಷಕರು, ಸೇನೈಮುದಲಿಯಾಲ್ (ವಿಷ್ವಕ್ಸೇನರು) ಮೊದಲಾದ ಅಮರರ್‌ಗಳೂ

ಮೂಲ: ಮುಕ್ತರಾವಾರ್ - ಭಗವತ್ಪ್ರಸಾದತ್ತಾಲೇ ಪ್ರಕೃತಿ ಸಂಬಂಧತ್ತಾಲ್‌ವನ್ದ ಕ್ಲೇಶಮಲಂಗಳೆಲ್ಲಾಂ ಕಳಿನ್ದು, ಭಗವತ್ಸ್ವರೂಪ - ರೂಪ - ಗುಣ - ವಿಭವಂಗಳೈ ಅನುಭವಿತ್ತು ಅವ್ವನುಭವಜನಿತ ಪ್ರೀತಿ ಉಳ್ಳಡಂಗಾಮೈಯಾಲೇ, ವಾಯಾರಪ್ಪುಹಳ್‌ನ್ದು, ಮಿಾಳ್ಚಿಯಿನ್ರಿ, ವೈಹುನ್ದ ಮಾನಹರತ್ತಿಲೇ ಕಳಿತ್ತು ಆನನ್ದಿಕ್ಕಿರ - ಮುನಿವರ್‌ಹಳ್.

ಎರಡನೆಯದಾಗಿ ಹೇಳಲ್ಪಟ್ಟ ಮುಕ್ತರ ಸ್ವರೂಪವನ್ನು ಮುಂದೆ ವಿವರಿಸುತ್ತಾರೆ.

(ಮುಕ್ತರಾವರ್ ... ಕಳಿನ್ದು) - ಭಗವಂತನ ನಿರ್ಹೇತುಕವಾದ ಅನುಗ್ರಹದಿಂದ ಪ್ರಕೃತಿ ಸಂಬಂಧದಿಂದ ಏರ್ಪಟ್ಟ ಕ್ಲೇಶಮಲಗಳೆಲ್ಲಾ ಕಳೆಯಲ್ಪಟ್ಟು ;

(ಭಗವತ್ಸ್ವರೂಪ ..... ಮೈಯಾಲೇ) -ಭಗವಂತನ ಸ್ವರೂಪ, ರೂಪ, ಗುಣ ವೈಭವಗಳೆಲ್ಲವನ್ನೂ ಅನುಭವಿಸಿ, ಆ ಅನುಭವದಿಂದ ಏರ್ಪಟ್ಟ ಪ್ರೀತಿ ಒಳಗೆ ಅಡಗದೆ;

(ವಾಯಾರ ... ಮುನಿವರ್‌ಹಳ್) -ಬಾಯ್ತುಂಬ ಕೊಂಡಾಡಿ, ಮುಕ್ತ ಎಂದೂ ಹಿಂತಿರುಗಿ ಈ ಲೋಕಕ್ಕೆ ಬಾರದೆ, ವೈಕುಂಠ ಮಹಾಲೋಕದಲ್ಲಿ ಪರಿಪೂರ್ಣರಾಗಿ ಆನಂದಿಸುವ ಮುನಿವರುಗಳು.

ಮೂಲ: ಬದ್ಧರಾವಾರ್ - ಪಾಂಚಭೌತಿಕಮಾಯ್ ಅನಿತ್ಯಮಾಯ್, ಸುಖದುಃಖಾನುಭವಪರಿಕರಮಾಯ್. ಆತ್ಮವಿಶ್ಲೇಷತ್ತಿಲ್ ದರ್ಶನ, ಸ್ಪರ್ಶನಯೋಗ್ಯಮಿಲ್ಲಾದಪಡಿ ಅಶುದ್ಧಾಸ್ಪದಮಾಯ್; ಅಜ್ಞಾನ ಅನ್ಯಥಾಜ್ಞಾನ - ವಿಪರೀತಜ್ಞಾನ ಜನಕಮಾನ ಸ್ವದೇಹಮೇ ಆತ್ಮಾವಾಹವುಂ, ಶಬ್ದಾದಿವಿಷಯಾನುಭವ ಜನಿತಮಾನ ಸ್ವದೇಹಪೋಷಣಮೇ ಪುರುಷಾರ್ಥಮಾಹವುಂ; ಶಬ್ದಾದಿ ವಿಷಯಲಾಭತ್ತುಕ್ಕು ಉರುಪ್ಪಾಹ ವರ್ಣಾಶ್ರಮಧರ್ಮಂಗಳ್ಳೆ ಅಳಿಯಮಾರಿಯುಂ, ಅಸೇವ್ಯ ಸೇವೈ ಪಣ್ಣಿಯುಂ, ಭೂತಹಿಂಸೈ ಪಣ್ಣಿಯುಂ, ಪರದಾರ - ಪರದ್ರವ್ಯಾಪಹಾರಂ ಪಣ್ಣಿಯುಂ, ಸಂಸಾರವರ್ಧಕರಾಯ್, ಭಗವದ್ವಿಮುಖರಾನ ಚೇತನರ್.

ಮೂರನೆಯದಾಗಿ ಹೇಳಲ್ಪಟ್ಟ 'ಬದ್ಧರ್' ಎಂಬುವವರ ವಿವರಣೆಯನ್ನು ಈ ಸೂತ್ರದಲ್ಲಿ ನೀಡುತ್ತಾರೆ.

('ಬದ್ಧರು' ಪಾಂಚಭೌತಿಕ ..... ಅಶುದ್ಧಾಸ್ಪದಮಾಯ್) - ಬದ್ಧರು ಎಂದರೆ; ಪೃಥಿವೀ, ಅಪ್, ತೇಜೋ, ವಾಯು, ಆಕಾಶ ಎಂಬ ಐದು ಭೂತಗಳಿಂದಾಗಿ, ನಶ್ವರವಾದಿ ಚೇತನರು ಸುಖ ದುಃಖಾನುಭವವನ್ನು ಪಡೆವುದಕ್ಕೆ ಪರಿಕರವಾಗಿ, ಆತ್ಮನಿಲ್ಲಧಾಗ ನೋಡುವುದಕ್ಕೂ ಸ್ಪರ್ಶಿಸುವುಧಕ್ಕೂ ಅರ್ಹವಲ್ಲದೆ ಅಶುದ್ಧವಾಗಿ;

(ಅಜ್ಞಾನ ..... ಆತ್ಮಾವಾಹವುಂ) - ಅಜ್ಞಾನ-ವಸ್ತುವಿನ ಬಗ್ಗೆ ಏನೂ ತಿಳಿಯದಿರುವಿಕೆ)

ಅನ್ಯಥಾಜ್ಞಾನ - (ವಸ್ತುವಿನ ಗುಣವನ್ನು ಬೇರೆಯಾಗಿ ಭಾವಿಸುವಿಕೆ)

ವಿಪರೀತ ಜ್ಞಾನ -(ವಸ್ತುವನ್ನೇ ಬೇರೆ ವಸ್ತುವಾಗಿ ಭಾವಿಸುವಿಕೆ)ಗಳಿಗೆ ಮೂಲವಾಗಿರುವ ತನ್ನ ದೇಹವನ್ನೇ 'ಆತ್ಮಾ' ಎಂಬುದಾಗಿಯೂ;

(ಶಬ್ದಾದಿ ..... ಪುರುಷಾರ್ಥಮಾಹವುಂ) - ಇಂತಹ ದೇಹದಲ್ಲಿರುವ ಇಂದ್ರಿಯಗಳ ಮೂಲಕ ಪಡೆಯುವ ಶಬ್ದಾದಿ ವಿಷಯಾನುಭವಗಳಿಂದ ತನ್ನ ದೇಹವನ್ನು ಪೋಷಿಸುವುದೇ ಪುರುಷಾರ್ಥವೆಂದೂ;

(ಶಬ್ದಾದಿ ..... ಅಲಿಯಮಾರಿಯುಂ) - ಈ ಶಬ್ದಾದಿ ವಿಷಯಲಾಭಕ್ಕಾಗಿ ವರ್ಣಾಶ್ರಮಧರ್ಮಗಳನ್ನೂ ತ್ಯಜಿಸಿದವರಾಗಿ;

(ಅಸೇವ್ಯ ..... ಪಣ್ಣಿ) - ಯಾರು ಸೇವೆಮಾಡಿಸಿಕೊಳ್ಳುವುದಕ್ಕೆ ಯೋಗ್ಯತೆಯಿಲ್ಲದವರೋ ಅಂತಹವರ ಸೇವೆಯನ್ನು ಮಾಡುವವರಾಗಿ;

(ಭೂತಹಿಂಸೈ ಪಣ್ಣಿ) - ಎಲ್ಲ ಭೂತ (ಜೀವರಾಶಿಗಳೂ) ಗಳನ್ನೂ ಹಿಂಸಿಸುವವರಾಗಿ

(ಪರದಾರ ..... ಚೇತನರ್) - ಮತ್ತೊಬ್ಬರ ಪತ್ನೀ, ಧನಕನಕಾಧಿಗಳನ್ನು ಅಪಹರಿಸಿ, ಸಂಸಾರವನ್ನೇ (ಜನನ -ಮರಣ ಚಕ್ರ) ಅಭಿವೃದ್ಧಿಮಾಡಿಕೊಳ್ಳುವ ಭಗವಂತನಿಂದ ವಿಮುಖರಾದ -ಚೇತನರು.

ಮೂಲ: ಕೇವಲನಾವಾನ್ -ತನಿಯಿಡತ್ತಿಲೇ ಮಿಹವುಂ ಕ್ಷುತ್ ಪಿಪಾಸೆಹಳಾಲೇ ನಲಿವು ಪಟ್ಟವನ್, ಭಕ್ಷ್ಯಾಭಕ್ಷ್ಯ ವಿವೇಕಂ ಪಣ್ಣಮಾಟ್ಟಾದೇ ತನ್ನುಡಮ್ಬೈತ್ತಾನೇ ಭುಜಿತ್ತು ಪ್ರಸನ್ನನಾಮಾಪ್ಪೋಲೇ; ಸಂಸಾರ ದಾವಾಗ್ನಿಯಾಲೇ ತಪ್ತನಾನವನ್ ಸಂಸಾರದುಃಖನಿವೃತ್ತಿಕ್ಕುರುಪ್ಪಾಹ ಶಾಸ್ತ್ರಜನ್ಯ ಜ್ಞಾನತ್ತಾಲೇ ಪ್ರಕೃತ್ಯಾತ್ಮವಿವೇಕಂ ಪಣ್ಣಿ;

ನಾಲ್ಕನೆಯದಾಗಿ ಹೇಳಲ್ಪಟ್ಟ 'ಕೇವಲನ' ಸ್ವರೂಪ ಸ್ವಭಾವಗಳು ಇಲ್ಲಿ ವಿವರಿಸಲ್ಪಟ್ಟಿವೆ.

(ಕೇವಲ ..... ನಾಮಾಪ್ಪೋಲೇ) - ಕೇವಲನೆಂದರೆ -ಏಕಾಂತವಾದ ಸ್ಥಳದಲ್ಲಿ ಹಸಿವು ಬಾಯಾರಿಕೆಗಳಿಂದ ಪೀಡಿತನಾದವನೊಬ್ಬ

ತಿನ್ನಬಹುದಾದದ್ದು - ತಿನ್ನಬಾರದ್ದು ಎಂಬ ವಿವೇಚನೆ ಇಲ್ಲದೆ ತನ್ನ ದೇಹವನ್ನೇ ತಾನೇ ತಿಂದು ತೃಪ್ತಿಪಡುವಂತೆ;

(ಸಂಸಾರ ..... ಪಣ್ಣಿ) - ಸಂಸಾರದ ದಾವಾಗ್ನಿಯಲ್ಲಿ ಬೆಂದವನು ಈ ಸಂಸಾರ ದುಃಖ ನಿವೃತ್ತಿಗಾಗಿ ಶಾಸ್ತ್ರಗಳನ್ನು ಅಭ್ಯಾಸಮಾಡಿ, ಅದರಿಂದ ಏರ್ಪಟ್ಟ ಜ್ಞಾನದಿಂದ ಜಡವಾದ ಪ್ರಕೃತಿ, ಹಾಗೂ ಜ್ಞಾನಸ್ವರೂಪನಾದ ಆತ್ಮ ಇವುಗಳನ್ನು ವಿವೇಚಿಸಿ;

ಮೂಲ: ಪ್ರಕೃತಿ - ದುಃಖಾಶ್ರಯಮಾಯ್ ಹೇಯಪದಾರ್ಥ ಸಮುದಾಯಮಾಯಿರುಕ್ಕಿರ ಆಕಾರತ್ತೈಯುಂ; ಆತ್ಮಾ - ಪ್ರಕೃತೇಃ ಪರನಾಯ್, ಪಂಚವಿಂಶಕನಾಯ್, ಸ್ವಯಂ ಪ್ರಕಾಶನಾಯ್, ಸ್ವತಃ ಸುಖಿಯಾಯ್; ನಿತ್ಯನಾಯ್ ಅಪ್ರಾಕೃತನಾಯ್, ಇರುಕ್ಕಿರ ಆಕಾರತ್ತೈಯುಂ ಅನುಸಂಧಿತ್ತು;

ಪ್ರಕೃತಿಯು ದುಃಖಕ್ಕೆ ಆಶ್ರಯವಾಗಿಯೂ, ಹೇಯವಾದ ಪದಾರ್ಥಗಳ ಸಮುದಾಯವಾಗಿರುವ ಅದರ ಆಕಾರವನ್ನೂ ಅರಿತು; ಆತ್ಮಾ - ಈ ಪ್ರಕೃತಿಗಿಂತ ಉತ್ಕೃಷ್ಟನಾಗಿ, ಪ್ರಕೃತಿ ತತ್ವಗಳು 24 ಅದಕ್ಕಿಂತ ಮೇಲ್ಪಟ್ಟ ಇಪ್ಪತ್ತೈದನೆಯ ತತ್ವವಾಗಿ, ತನ್ನನ್ನು ತಾನೇ ಪ್ರಕಾಶಪಡಿಸಿಕೊಳ್ಳುವವನಾಗಿ, ಸ್ವತಃ ಸುಖಿಯಾಗಿ, ಶಾಶ್ವತವಾಗಿ, ಅಪ್ರಾಕೃತನಾಗಿ ಇರುವ ಆತ್ಮನ ಆಕಾರವನ್ನೂ ಅನುಸಂಧಾನಮಾಡಿ;

ಮೂಲ: ಮುನ್ಬುತಾನ್‌ಪಟ್ಟ ದುಃಖತ್ತಿನ್ ಘನತ್ತಾಲೇ, ಇವ್ವಲ್ಲರಸತ್ತಿಲೇ ಕಾಲ್‌ತಾಳ್‌ನ್ದು. ಉಣರ್‌ಮುಳುನಲಮಾನ ಪರಮಾತ್ಮವಿವೇಕಂ ಪಣ್ಣಮಾಟ್ಟಾದೇ. ಅಮುದವೆಳ್ಳೈತ್ತಾನಾಂ ಶಿರಪ್ಪುವಿಟ್ಟು, ಅವ್ವಾತ್ಮ ಪ್ರಾಪ್ತಿಕ್ಕು ಸಾಧನಮಾನ ಜ್ಞಾನಯೋಗತ್ತಿಲೇ ನಿಷ್ಠನಾಯ್; ಯೋಗಫಲಮಾನ ಆತ್ಮಾನುಭವಯಾತ್ರೈಯೇ ಪುರುಷಾರ್ಥಮಾಹ ಅನುಭವಿತ್ತು; ಪಿನ್ಬು ಸಂಸಾರ ಸಂಬಂಧಮುಂ, ಭಗವತ್ಪ್ರಾಪ್ತಿಯೈಯುಂ

ಅತ್ತು ಯಾವದಾತ್ಮಭಾವಿ ಅಶರೀರಿಯಾಯ್‌ಕ್ಕೊಂಡು ತಿರಿವಾನ್ಒರುವನ್.

ಈ ಮೊದಲು ತಾನು ಅನುಭವಿಸಿದ ದುಃಖಭಾರದಿಂದ ಈ ಜೀವಾತ್ಮಾನುಭವವೆಂಬ ಅಲ್ಪರಸದಲ್ಲಿ ಕಾಲುಜಾರಿ, ಪರಿಪೂರ್ಣ ಆನಂದ ಸ್ವರೂಪ ಪರಮಾತ್ಮನ ಕುರಿತು ವಿವೇಚಿಸದೆ, ಸುಲಭ ಉಪಾಯದಿಂದ ಅಮೃತ ಪ್ರವಾಹವಾದ ಭಗವಂತನನ್ನು ಕೈಬಿಟ್ಟು, ಜೀವಾತ್ಮ ಪ್ರಾಪ್ತಿಗೆ ಸಾಧನವಾದ ಜ್ಞಾನಯೋಗದಲ್ಲಿ ನಿಷ್ಠನಾಗಿ, ಆ ಯೋಗಫಲವಾದ ಆತ್ಮಾನುಭವಮಾತ್ರವನ್ನೇ ಪುರುಷಾರ್ಥವಾಗಿ. ಅನುಭವಿಸಿ ಅನಂತರ ಸಂಸಾರ ಸಂಬಂಧವನ್ನೂ, ಭಗವತ್ಪ್ರಾಪ್ತಿಯನ್ನೂ ಕಳೆದುಕೊಂಡು ಜೀವಾತ್ಮವಿರುವವರೆಗೂ ಶರೀರವಿಲ್ಲದೆ ಅಲೆಯುವವನಾಗಿದ್ದಾನೆ.

ಮೂಲ: ಮೋಕ್ಷತ್ತಿಲೇ ಇಚ್ಛೈಯುಡೈವರ್ಗಳುಕ್ಕು 'ಮುಮುಕ್ಷು'ಕ್ಕಳೆನ್ನು ಪೇರಾಹಕ್ಕಡವದು. ಇದುತಾನ್, ಮುಮುಕ್ಷುಕ್ಕಳಾಯ್ ಉಪಾಸಕರಾಯಿರುಪ್ಪಾರುಂ, ಮುಮುಕ್ಷುಕ್ಕಳಾಯ್ ಪ್ರಪನ್ನರಾಯಿಪ್ಪಾರುಮಾಯ್, ಇರಣ್ಡುಪಡಿಪಟ್ಟಿರುಕ್ಕುಂ.

ಮೋಕ್ಷದಲ್ಲಿ ಇಚ್ಛೆಯುಳ್ಳವರಿಗೆ 'ಮುಮುಕ್ಷು 'ಗಳೆಂದು ಹೆಸರು. ಮೋಕ್ಷದಲ್ಲಿ ಇಚ್ಛೆಯುಳ್ಳವರಾಗಿ, ಉಪಾಸಕರಾಗಿರುವವರು ಒಂದು ವಿಧ. ಮೋಕ್ಷದಲ್ಲಿ ಇಚ್ಛೆಯುಳ್ಳವರಾಗಿ ಪ್ರಪನ್ನರಾಗಿರುವವರು ಮತ್ತೊಂದು ವಿಧ. ಹೀಗೆ ಇವರು ಎರಡು ವಿಧವಾಗಿದ್ದಾರೆ.

ಈ ರೀತಿ ನಿತ್ಯ, ಮುಕ್ತ, ಬದ್ಧ, ಕೇವಲ, ಮುಮುಕ್ಷು ಎಂಬ ಐದು ವಿಧವಾದ ಆತ್ಮವರ್ಗಗಳನ್ನು ನಿರೂಪಿಸಿ ಜೀವಾತ್ಮ ಸ್ವರೂಪ ನಿರ್ಣಯವನ್ನು ಈ ಪ್ರಕರಣದಲ್ಲಿ ಮಾಡಲಾಯಿತು.

॥ಸ್ವಾಮಿ ಪಿಳ್ಳೈಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

## ಈಶ್ವರ ಸ್ವರೂಪ ನಿರೂಪಣ ಪ್ರಕರಣಂ

ಅರ್ಥ ಪಂಚಕದಲ್ಲಿ ಎರಡನೆಯದಾಗಿ ಜ್ಞಾತವ್ಯವೆಂದು ಹೇಳಲ್ಪಟ್ಟ 'ಪರಮಾತ್ಮ ಸ್ವರೂಪದ' ಐದು ಪ್ರಕಾರಗಳನ್ನು ಈ ಪ್ರಕರಣದಲ್ಲಿ ಸೂತ್ರಕಾರರು ವಿವರಿಸುತ್ತಾರೆ.

ಮೂಲ: ಈಶ್ವರವಿಷಯತ್ತಿಲ್ - ಪರತ್ವಮಾವದು - ಪರಮಪದತ್ತಿಲೇ 'ಅವಾಕೀ ಅನಾದರಃ'[1] ಎನ್ರು ಎಳುಂದರುಳಿ ಇರುಕ್ಕಿರ 'ಆದಿಯಂಶೋದಿ ಉರುವಾನ[2] ಪರವಾಸುದೇವರ್.

ಈಶ್ವರ ಸ್ವರೂಪದ ಐದು ಪ್ರಕಾರಗಳಲ್ಲಿ ಮೊದಲನೆಯದಾದ 'ಪರತ್ವ'ವನ್ನು ಈ ಸೂತ್ರದಲ್ಲಿ ವಿವರಿಸುತ್ತಾರೆ.

(ಪರತ್ವ ..... ಪರವಾಸುದೇವನ್) - ಪರಮಪದದಲ್ಲಿ 'ಅವಾಕೀ ಅನಾದರಃ'[1] - ಎಂಬಂತೆ ಯಾರೊಡನೆಯೂ ಮಾತನಾಡದೆ, ಯಾರನ್ನೂ ಆದರಿಸದ ತನ್ನ ಅತಿಶ್ರೇಷ್ಠವಾದ ಪರತ್ವದ ಸೊಕ್ಕಿನಿಂದ ಬಿಜಯ ಮಾಡಿಸಿರುವ 'ಆದಿಯಂ ಶೋತಿಉರು'[2] - ಆದಿಯಾಗಿ ಅತಿ ಸುಂದರವಾದ ಜ್ಯೋತಿರ್ಮಯವಾದ ದಿವ್ಯಮಂಗಳ ಸ್ವರೂಪನಾದ 'ಪರವಾಸುದೇವ'ನೇ ಈಶ್ವರನ ಪರಸ್ವರೂಪ.

ಮೂಲ: ವ್ಯೂಹಮಾವದು - ಸೃಷ್ಟಿ, ಸ್ಥಿತಿ, ಸಂಹಾರಕರ್ತಾಕ್ಕಳಾನ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರ್‌ಹಳ್.

ಈಶ್ವರ ಸ್ವರೂಪದಲ್ಲಿ ಎರಡನೆಯದಾದ 'ವ್ಯೂಹ'ವನ್ನು ಇಲ್ಲಿ ತಿಳಿಸುತ್ತಾರೆ.

ವ್ಯೂಹವೆಂದರೆ - ಸೃಷ್ಟಿ, ಸ್ಥಿತಿ, ಸಂಹಾರಕಾರ್ಯವನ್ನು ನಡೆಸುವ ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರುಗಳಾಗಿರುತ್ತಾರೆ.

(ಇದರ ವಿವರಗಳನ್ನು 'ತತ್ವತ್ರಯ'ದ ಈಶ್ವರ ಪ್ರಕರಣದಲ್ಲಿ ಕಾಣಬಹುದು)

ಮೂಲ: ವಿಭವಮಾವದು - ರಾಮಕೃಷ್ಣಾದ್ಯವತಾರಂಗಳ್.

ಮೂರನೆಯದಾದ ಪರಮಾತ್ಮನ ಅವತಾರ ರೂಪಕ್ಕೆ 'ವಿಭವ' ಎಂದು ಹೆಸರು. ಮತ್ಸ್ಯ, ಕೂರ್ಮ, ವರಾಹ, ರಾಮ, ಕೃಷ್ಣ, ಈ ರೀತಿಯಾಗಿರುವ ಹಲವಾರು ಅವತಾರಗಳೇ ವಿಭವ ಎನಿಸುವುದು.

(ಇದರ ವಿವರಗಳೂ 'ತತ್ವತ್ರಯ'ದ ಈಶ್ವರ ಪ್ರಕರಣದಲ್ಲಿ ಲಭ್ಯ)

ಮೂಲ: ಅಂತರ್ಯಾಮಿತ್ವಮ್ -ಇರಂಡುಪಡಿ ಪಟ್ಟಿರುಕ್ಕುಂ.

ನಾಲ್ಕನೆಯದಾಗಿ ಹೇಳಲ್ಪಟ್ಟ ಪರಮಾತ್ಮನ ಅಂತರ್ಯಾಮಿ ಸ್ವರೂಪವು ಎರಡು ವಿಧವಾಗಿದೆ.

ಮೂಲ: ಅದಾವದು - 'ಅಡಿಯೇನುಳ್ಳಾನ್'[1] ಎನ್ರುಂ 'ಎನದಾವಿ'[2] ಎನ್ರುಂ 'ಎನ್ನುಯಿರ್' ಎನ್ನುಂ ಶೊಲ್ಲುಹಿರಪಡಿಯೇ ಆತ್ಮಾವುಕ್ಕುಳ್ಳುಂ;

ಆ ಎರಡರಲ್ಲಿ ಮೊದಲನೆಯದಾಗಿ 'ಅಡಿಯೇನುಳ್ಳಾನ್' (ಈ ದಾಸನ ಒಳಗಿದ್ದಾನೆ) ಎಂದೂ 'ಎನದಾವಿ' (ನನ್ನ ಆತ್ಮ) ಎಂದೂ 'ಎನ್ನುಯಿರ್' (ನನ್ನ ಉಸಿರು) ಎಂದೂ ನಮ್ಮಾಳ್ವಾರರಿಂದ 'ತಿರುವಾಯ್ಮೊಳಿ' ಗ್ರಂಥದಲ್ಲಿ ಹೇಳಲ್ಪಡುವಂತೆ ಜೀವಾತ್ಮನ ಒಳಗೂ;

ಮೂಲ: 'ಪೋದಿರ್ಕಮಲವನ್ನೆಂಜಂ 'ಪುಹುಂದು'[3] ಎನ್ರುಂ; 'ಅರವಿಂದಪ್ಪಾವೈಯುಂ ತಾನುಂ ಅಹಂಪಡಿವನ್ದು ಪುಹುನ್ದು'[4] ಎನ್ರುಂ; 'ಪುನ್ದಿಯಿಲ್‌ಪುಹುನ್ದು ಎನ್ಬಾಲ್ ಆದರಂ ಪೆರುಹವೈತ್ತ ಅಳಹನ್'[5] ಎಂದೂ; 'ಉಳ್ಳುವಾರುಳ್ಳಿತ್ತೆಲ್ಲಾಂ ಉಡನಿರುನ್ದರುದಿ'[6] ಎನ್ರುಂ ಶೊಲ್ಲುಹಿರಪಡಿಯೇ;

ಅಂತರ್ಯಾಮಿಸ್ವರೂಪ ಎರಡನೆಯ ವಿಧವಾಗಿ, 'ಅರಳಿದ ಕಮಲದಂತಹ ನನ್ನ ಹೃದಯವನ್ನು ಪ್ರವೇಶಿಸಿ' ಎಂಬಂತೆಯೂ 'ತಾವರೆ ಹೂವಿನಲ್ಲಿರುವ ಮಹಾಲಕ್ಷ್ಮಿಯೂ ತಾನೂ ಬಂದು ನನ್ನ ಹೃದಯನ್ನು ಪ್ರವೇಶಿಸಿ' ಎಂಬಂತೆಯೂ 'ನನ್ನ ಬುದ್ಧಿಯಲ್ಲಿ ಪ್ರವೇಶಿಸಿ ನನ್ನ ವಿಷಯದಲ್ಲಿ ಆದರವನ್ನು ಉಕ್ಕಿಹರಿಸಿದ' ಎಂಬಂತೆಯೂ, 'ಎಲ್ಲರ ಮನದಲ್ಲೂ ಜೊತೆಯಲ್ಲೇ ಇದ್ದು ಎಲ್ಲವನ್ನೂ ಅರಿತು' ಎಂಬಂತೆಯೂ ಹೇಳಲ್ಪಡುವಂತೆ.

ಮೂಲ: ಲಕ್ಷ್ಮೀಸಹಿತವಾಯ್, ವಿಲಕ್ಷಣ ವಿಗ್ರಹನಾಯ್‌ಕ್ಕೊಂಡು ಹೃದಯಕಮಲತ್ತುಳ್ಳೇ ಸಕಲ ಪ್ರವೃತ್ತಿ ನಿವೃತ್ತಿಹಳೈಯುಂ ಸದಾವಲೋಕನಂ ಪಣ್ಣಿಕ್ಕೊಂಡು ಎಳುಂದರುಳಿಯಿರುಕ್ಕುಮಿರುಪ್ಪು,

ಲಕ್ಷ್ಮೀಸಮೇತನಾಗಿ ವಿಲಕ್ಷಣ ವಿಶಿಷ್ಟ ವಿಗ್ರಹನಾಗಿದ್ದು ಹೃದಯ ಕಮಲದಲ್ಲಿ ಜೀವಾತ್ಮನ ಸಕಲ ಪ್ರವೃತ್ತಿಗಳನ್ನೂ, ನಿವೃತ್ತಿಗಳನ್ನೂ ಸದಾಕಾಲ ನೋಡುತ್ತ ಬಿಜಯ ಮಾಡಿಸಿರುವ ರೂಪವು ಒಂದು ರೀತಿಯಾಗಿದೆ.

ಹೀಗೆ ಜೀವಾತ್ಮನ ಒಳಗಿರುವುದು ಹಾಗೂ ಜೀವಾತ್ಮನ ಧರಿಸಿರುವ ದೇಹದಲ್ಲಿನ ಹೃದಯ ಕಮಲದಲ್ಲಿರುವುದು ಎಂಬುದಾಗಿ ಅಂತರ್ಯಾಮಿ ಸ್ವರೂಪವು ಎರಡು ಬಗೆಯಾಗಿದೆ.

ಮೂಲ: ಅರ್ಚಾವತಾರಮಾವದು 'ತಮರುಹನ್ದದೆವ್ವುರುವಂ ಅವ್ವುರು ವನ್ನಾನೇ'[7] ತಮರುಹನ್ದದಪ್ಪೇರ್ ಮತ್ತಪ್ಪೇರ್' ಎನ್ಗಿರಪಡಿಯೇ ತನಕ್ಕೆನ್ನ ಓರುರುವಂ ಒರುಪೆಯರುಮಿನ್ರಿಕ್ಕೇ ಆಶ್ರಿತರ್ ಉಹನ್ದಪಡಿ ವಡಿವಾಹವುಂ; ಅವರ್‌ಹಳ್ ಇಟ್ಟದೇ ಪೆಯರಾಹವುಂ;

ಐದನೆಯದಾದ ಅರ್ಚಾಸ್ವರೂಪವನ್ನು ಈ ಸೂತ್ರದಲ್ಲಿ ವಿವರಿಸುತ್ತಾರೆ.

ಅರ್ಚಾವತಾರವೆಂದರೆ ;- 'ಭಕ್ತರು ಮೆಚ್ಚಿದ ರೂಪವೇ ಅವನ ರೂಪ; ಭಕ್ತರು ಮೆಚ್ಚಿ ಕರೆದದ್ದೇ ಅವನ ಹೆಸರು' ಎಂಬಂತೆ ತನಗಾಗಿ ಒಂದು ರೂಪವೂ, ಹೆಸರು ಇಲ್ಲದವನಾಗಿ ಆಶ್ರಿತರು ಆಶಿಸಿದ ರೂಪವುಳ್ಳವನಾಗಿಯೂ ಅವರಿಟ್ಟ ಹೆಸರನ್ನೇ ಉಳ್ಳವನಾಗಿಯೂ;

ಮೂಲ: ಸರ್ವಜ್ಞನಾಯಿರುಕ್ಕಚೆಯ್ದೇ ಅಜ್ಞನೈಪ್ಪೋಲೇಯುಂ ಸರ್ವಶಕ್ತನಾಯಿರುಕ್ಕ ಚ್ಚೆಯ್ದೇ ಅಶಕ್ತನೈಪ್ಪೋಲೇಯುಂ; ಅವಾಪ್ತ ಸಮಸ್ತಕಾಮನಾಯಿರುಕ್ಕ ಚ್ಚೆಯ್ದೇ ಸಾಪೇಕ್ಷನೈಪ್ಪೋಲೇಯುಂ; ಸರ್ವರಕ್ಷಕನಾಯಿರುಕ್ಕಚ್ಚೆಯ್ದೇ ರಕ್ಷ್ಯಮ್ಪೋಲೇಯುಂ, ಸ್ವಸ್ವಾಮಿಭಾವತ್ತೈ ಮಾರಾಡಿಕ್ಕೊಂಡು ಕಣ್ಣುಕ್ಕು ವಿಷಯಮಾಮ್ಪಡಿ, ಸರ್ವಸುಲಭನಾಯ್‌ಕ್ಕೊಂಡು ಕೋಯಿಲ್‌ಹಳಿಲುಂ, ಗೃಹಂಗಳಿಲುಂ, ದೇಶಕಾಲಾವಧಿಯಿನ್ರಿಕ್ಕೇ ಎಳುಂದರುಳಿ ಇರುಕ್ಕುಂ ನಿಲೈ.

(ಸರ್ವಜ್ಞ) ಎಲ್ಲವನ್ನೂ ಅರಿತವನಾಗಿದ್ದರೂ ಏನೂ ಅರಿಯದವನಂತೆಯೂ, ಎಲ್ಲವನ್ನೂ ಸಾಧಿಸಬಲ್ಲ ಸರ್ವಶಕ್ತನಾಗಿದ್ದರೂ ಏನೂ ಕೈಲಾಗದ ಅಶಕ್ತನಂತೆಯೂ, (ಅವಾಪ್ತ ಸಮಸ್ತಕಾಮ) ಎಲ್ಲವನ್ನೂ ಹೊಂದಿ ಪರಿಪೂರ್ಣ ತೃಪ್ತನಾಗಿದ್ದರೂ ಏನನ್ನೋ ನಮ್ಮಿಂದ ಅಪೇಕ್ಷಿಸುವವನಂತೆಯೂ, ಎಲ್ಲರನ್ನೂ ರಕ್ಷಿಸುವವನಾಗಿದ್ದರೂ (ರಕ್ಷಕ) ನಮ್ಮಿಂದ ರಕ್ಷಿಸಲ್ಪಡಬೇಕಾದವನಂತೆಯೂ (ರಕ್ಷ್ಯ) ತಾನು ಸ್ವಾಮಿ, ನಾವುಗಳು ದಾಸರು ಎಂಬ ಸ್ವಾಮಿದಾಸ ಸ್ವಭಾವವನ್ನೇ ಮಾರ್ಪಡಿಸಿಕೊಂಡು, ಎಲ್ಲರ ಕಣ್ಣಿಗೂ ಕಾಣುವಂತೆ ಸರ್ವಸುಲಭನಾಗಿ ದೇವಾಲಯಗಳಲ್ಲೂ, ಮನೆಗಳಲ್ಲೂ ಇಂತಹ ಪ್ರದೇಶ, ಇಂತಹ ಕಾಲ ಎಂಬ ನಿಯಮವಿಲ್ಲದೆ ಬಿಜಯಮಾಡಿಸಿರುವಿಕೆಯಾಗಿದೆ.

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಂ ॥

॥ ಜೀಯರ್ ತಿರುವಡಿಗಳೇ ಶರಣಂ ॥

# ಪುರುಷಾರ್ಥ ಸ್ವರೂಪ ನಿರೂಪಣ ಪ್ರಕರಣಮ್

ಅರ್ಥಪಂಚಕದಲ್ಲಿ ಅರಿಯಬೇಕಾದ್ದರಲ್ಲಿ ಮೂರನೆಯದಾದ 'ಪುರುಷಾರ್ಥ ಸ್ವರೂಪದ' ಐದು ಪ್ರಕಾರಗಳನ್ನು ಈ ಪ್ರಕರಣದಲ್ಲಿ ನಿರೂಪಿಸುತ್ತಾರೆ. ಅದರಲ್ಲಿ ಪ್ರಥಮವಾಗಿ ಧರ್ಮ ಪುರುಷಾರ್ಥವನ್ನು ವಿವರಿಸುತ್ತಾರೆ.

ಮೂಲ: ಪುರುಷಾರ್ಥಂಗಳಿಲ್ - ಧರ್ಮಮಾವದು - ಪ್ರಾಣಿರಕ್ಷಣತ್ತುಕ್ಕು ಉರುಪ್ಪಾಹ ಪಣ್ಣುಂ ವೃತ್ತಿ ವಿಶೇಷಂಗಳ್.

ಪುರುಷಾರ್ಥಗಳಲ್ಲಿ 'ಧರ್ಮ'ವೆಂದರೆ ಲೋಕದಲ್ಲಿರುವ ಎಲ್ಲ ಪ್ರಾಣಿಗಳ ರಕ್ಷಣೆಗೆ ಅನುವಾಗುವಂತೆ ಮಾಡುವ ವೃತ್ತಿ ವಿಶೇಷಗಳು.

ಉದಾ :- ಇಷ್ಟಾಪೂರ್ತಗಳು, ಮಾತಾಪಿತೃ ಸೇವೆ, ಗುರುಶುಶ್ರೂಷೆ ಇತ್ಯಾದಿಗಳು.

ವೇದ ಮಂತ್ರಸಹಿತವಾದ ಯಜ್ಞ ಯಾಗಾದಿಗಳು - 'ಇಷ್ಟಿ' ಎನಿಸುತ್ತವೆ. ಮರ ನೆಡುವುದು, ಕೆರೆ, ಬಾವಿ ಕಟ್ಟಿಸುವುದು, ಅನ್ನಸತ್ರ, ಅರವಟ್ಟಿಗೆ ಇಡಿಸುವುದೇ ಮುಂತಾದ ಸಮಾಜಸೇವೆ ಕಾರ್ಯಗಳು - 'ಪೂರ್ತ' ಎನಿಸುತ್ತವೆ.

ಮೂಲ: ಅರ್ಥಮಾವದು-ವರ್ಣಾಶ್ರಮಾನುರೂಪಮಾಹ ಧನಧಾನ್ಯಾದಿಹಳೈ ಸಂಗ್ರಹಿತ್ತು, ದೇವತಾವಿಷಂಗಳಿಲುಂ, ಪೈತೃಕಮಾನ ಕರ್ಮಂಗಳಿಲುಂ, ಪ್ರಾಣಿಗಳ್ ವಿಷಯಮಾಹವುಂ, ಉತ್ಕೃಷ್ಟಮಾನ ದೇಶಕಾಲಪಾತ್ರಂಗಳೈ ಅರಿನ್ದು ಧರ್ಮಬುದ್ಧ್ಯಾವ್ಯಯಿಕ್ಕೈ.

ಅರ್ಥಪುರುಷಾರ್ಥವೆಂದರೆ - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಸನ್ಯಾಸಗಳೆಂಬ ನಾಲ್ಕು ಆಶ್ರಮಗಳು. ನಾಲ್ಕುವರ್ಣದಲ್ಲಿರುವ ನಾಲ್ಕು ವಿಧವಾದ ಆಶ್ರಮಿಗಳಿಗೂ ಧನಧಾನ್ಯಗಳನ್ನು ಸಂಗ್ರಹಿಸಲು ಬೇರೆ

ಬೇರೆ ಶಾಸ್ತ್ರೋಕ್ತವಾದ ನಿಯಮಗಳಿವೆ. ಆ ಪ್ರಕಾರವಾಗಿ ವರ್ಣ, ಆಶ್ರಮಾನುರೂಪವಾಗಿಧನಧಾನ್ಯಾದಿಗಳನ್ನು ಸಂಗ್ರಹಿಸಿ, ಅವನ್ನು ದೇವತೆಗಳನ್ನು ಕುರಿತು ಮಾಡುವ ಯಜ್ಞ, ಯಾಗಾದಿಗಳಲ್ಲೂ, ಪಿತೃ ದೇವತೆಗಳನ್ನು ಕುರಿತು ಮಾಡುವ ಶ್ರಾದ್ಧಾದಿ ಕರ್ಮಗಳಲ್ಲೂ, ಭೂತದಯೆಯಿಂದ ಪ್ರಾಣಿಗಳಿಗೆ ನೀಡುವುದೂ, ಸತ್ಪಾತ್ರರಾಗಿರುವವರಿಗೆ ದೇಶಕಾಲಗಳನ್ನರಿತು ಧರ್ಮಬುದ್ಧ್ಯಾ ಆ ಧನಧಾನ್ಯಾದಿಗಳನ್ನು ವ್ಯಯ ಮಾಡುವಿಕೆಯಾಗಿದೆ.

ಎಂದರೆ ಇಷ್ಟಬಂದಂತೆ ಧನಧಾನ್ಯಗಳನ್ನು ಸಂಗ್ರಹಿಸಿ ತನ್ನ ಸ್ವಾರ್ಥಕ್ಕೆ ವ್ಯಯಿಸುವುದು 'ಅರ್ಥ'ವಲ್ಲ. ಶಾಸ್ತ್ರೋಕ್ತ ರೀತಿಯಲ್ಲಿ ಸಂಗ್ರಹಿಸಿ ಧರ್ಮಬುದ್ಧ್ಯಾ ವ್ಯಯ ಮಾಡಿದರೆ ಮಾತ್ರ ಅದು ಅರ್ಥಪುರುಷಾರ್ಥ ಎಂಬುದಾಗಿದೆ.

ಮೂಲ: ಕಾಮಮಾವದು - ಐಹಲೌಕಿಕಮಾಯುಂ, ಪಾರಲೌಕಿಕಮಾಯುಂ ದ್ವಿವಿಧಮಾಯಿರುಕ್ಕುಂ.

ಕಾಮ ಪುರುಷಾರ್ಥವು ಐಹಲೌಕಿಕ - ಎಂದರೆ ಈ ಲೋಕದಲ್ಲಿ ಪಡೆಯುವುದು; ಮತ್ತು ಪಾರಲೌಕಿಕ - ಪರಲೋಕದಲ್ಲಿ ಪಡೆಯುವಂತಹುದು ಎಂಬುದಾಗಿ ಎರಡು ವಿಧವಾಗಿದೆ.

ಮೂಲ: ಇಹಲೋಕತ್ತಿಲ್ ಕಾಮಮಾವದು - ಪಿತೃ, ಮಾತೃ, ರತ್ನ, ಧನ, ಧಾನ್ಯ- ವಸ್ತ್ರ-ಅನ್ನ - ಪಾನ - ಪುತ್ರ- ಮಿತ್ರ - ಕಳತ್ರ - ಗೃಹ - ಕ್ಷೇತ್ರ - ಚನ್ದನ - ಕುಸುಮ - ತಾಂಬೂಲಾದಿ ಪದಾರ್ಥಂಗಳಿಲ್ ಶಬ್ದಾದಿ ವಿಷಯಾನುಭವತ್ತಾಲ್ ವನ್ದ ಸುಖ ವಿಶೇಷಂಗಳ್.

ಇಹಲೋಕದಲ್ಲಿನ ಕಾಮವೆಂದರೆ - ಈ ಜನ್ಮದಲ್ಲಿ ಏರ್ಪಟ್ಟ ಶರೀರಕ್ಕೆ ಸಂಬಂಧಪಟ್ಟ ಬಂಧು ಬಾಂಧವ ಹಾಗೂ ಶರೀರಕ್ಕೆ ಸುಖವನ್ನು ನೀಡುವುಗಳಿಂದ ಏರ್ಪಡುವ ಅನುಭವವಾಗಿದೆ.

ಶರೀರ ಬಂಧುಗಳೆಂದರೆ - ತಂದೆ, ತಾಯಿ, ಪುತ್ರ, ಮಿತ್ರ, ಪತ್ನಿ ಇತ್ಯಾದಿಯಾಗಿರುವರು.

ಶಬ್ದಾದಿ ವಿಷಯಾನುಭವಕ್ಕೆ ಅವಶ್ಯಕವಾದವುಗಳು - ರತ್ನ, ಧನ, ಧಾನ್ಯ, ವಸ್ತ್ರ ಅನ್ನ, ಪಾನ, ಗೃಹ, ಕ್ಷೇತ್ರ, ಚಂದನ, ಕುಸುಮ, ತಾಂಬೂಲಾದಿ ಪದಾರ್ಥಗಳು.

ಹೀಗೆ ಇವೆಲ್ಲವುಗಳಿಂದ ಈ ಲೋಕದಲ್ಲಿ ಈ ಶರೀರದಲ್ಲಿ ಪಡೆಯುವ ಸುಖವಿಶೇಷವು 'ಐಹಲೌಕಿಕ ಕಾಮ' ಎನಿಸಲ್ಪಡುತ್ತದೆ.

ಮೂಲ: ಪರಲೋಕತ್ತಿಲ್ ಕಾಮಮಾವದು - ಇದಿಲ್ ವಿಲಕ್ಷಣಮಾಯ್, ತೇಜೋರೂಪಮಾನ ಸ್ವರ್ಗಲೋಕಂಗಳಿಲೇ ಶೆನ್ರು, ಪಶಿ, ದಾಹ, ಶೋಕ, ಮೋಹ, ಜರಾ, ಮರಣಾದಿಗಳಿನ್ರಿಕ್ಕೇ. ಆರ್ಜಿತ್ತ ಪುಣ್ಯತ್ತು ಕ್ಕೀಡಾಹ ಅಮೃತಪಾನಂ ಪಣ್ಣಿ, ಅಪ್ಸರಸ್ಸುಕ್ಕಳೋಡೇ ಶಬ್ದಾದಿ ವಿಷಯಾನುಭವಂ ಪಣ್ಣುಹೈ.

ಪರಲೋಕದಲ್ಲಿನ ಕಾಮವೆಂದರೆ - ಇಹಲೋಕದ ಕಾಮಕ್ಕಿಂತ ವಿಲಕ್ಷಣವಾಗಿರುವುದಾಗಿ ತೇಜಸ್ಸಿನಿಂದ ಬೆಳಗುವ ಸ್ವರ್ಗಲೋಕಗಳಿಗೆ ಹೋಗಿ ಹಸಿವು, ದಾಹ ದುಃಖ, ಮೋಹ, ಮುಪ್ಪು, ಸಾವುಗಳಿಲ್ಲದೆ, ತಾನು ಒಳ್ಳೆಯ ಕಾರ್ಯಗಳನ್ನು ಮಾಡಿ ಸಂಪಾದಿಸಿದ ಪುಣ್ಯಕ್ಕೂ ಅನುಗುಣವಾಗಿ ಅಮೃತಪಾನ ಮಾಡಿ ಅಪ್ಸರಸ್ತ್ರೀಯರೊಡನೆ ಶಬ್ದಾದಿ ವಿಷಯಗಳನ್ನು ಅನುಭವಿಸುವಿಕೆಯಾಗಿದೆ.

ಮೂಲ: ಆತ್ಮಾನುಭವಮಾವದು – ದುಃಖ ನಿವೃತ್ತಿಮಾತ್ರಮಾನ ಕೇವಲಾತ್ಮಾನು ಭವ ಮಾತ್ರತ್ತೈಯುಂ 'ಮೋಕ್ಷ'ಮೆನ್ರು, ಶೊಲ್ಲುವರ್‌ಹಳ್.

'ಆತ್ಮಾನುಭವ' ಎಂದು ನಾಲ್ಕನೆಯದಾಗಿ ಹೇಳಲ್ಪಟ್ಟ ಪುರುಷಾರ್ಥವನ್ನು ತಿಳಿಸುತ್ತಾರೆ.

'ಆತ್ಮಾನುಭವವೆಂದರೆ - ದುಃಖ ನಿವೃತ್ತಿ ಮಾತ್ರವಾದ ಕೇವಲ ಆತ್ಮಾನುಭವ ಮಾತ್ರ ಇದನ್ನೂ 'ಮೋಕ್ಷ' ಎಂದು ಹೇಳುತ್ತಾರೆ. 'ಹೇಳುತ್ತಾರೆ' ಎಂಬುದರಿಂದ ಸೂತ್ರಕಾರರಿಗೆ ಇದನ್ನು ಮೋಕ್ಷವೆಂದು ಹೇಳುವುದರಲ್ಲಿ ಅಭಿಪ್ರಾಯವಿಲ್ಲ ಎಂಬುದು ವ್ಯಕ್ತವಾಗುತ್ತದೆ, ಏಕೆಂದರೆ ಈ ಸಿದ್ಧಾಂತದ ಪ್ರಕಾರ ಅನಿಷ್ಟ ನಿವೃತ್ತಿ ಪೂರ್ವಕ ಇಷ್ಟ ಪ್ರಾಪ್ತಿಯೇ ಮೋಕ್ಷ ಎಂಬುದಾಗಿದೆ. ಆದ್ದರಿಂದ ಕೇವಲ ಅನಿಷ್ಟವಾದ ದುಃಖ ನಿವೃತ್ತಿ ಮಾತ್ರವಾಗಿ ಆತ್ಮಾನುಭವ ಮಾತ್ರವಾಗಿರುವುದನ್ನು 'ಮೋಕ್ಷ'ವೆಂದು ಹೇಳುವುದು ಸೂತ್ರಕಾರರಿಗೆ ಸಮ್ಮತವಲ್ಲದ್ದಾಗಿದೆ. ಆದರೆ ಪುರುಷಾರ್ಥಗಳಲ್ಲಿ ಈ 'ಆತ್ಮಾನುಭವ'ವನ್ನು ಶಾಸ್ತ್ರಗಳು ಒಪ್ಪಿರುವುದರಿಂದ ಸೂತ್ರಕಾರರು ಪುರುಷಾರ್ಥಗಳ ಸಾಲಿನಲ್ಲಿ ಈ ಆತ್ಮಾನುಭವವನ್ನೂ ಸೇರಿಸಿ 'ಹೇಳುತ್ತಾರೆ' ಎಂಬುದಾಗಿ ಅದನ್ನು ನಿರೂಪಿಸಿದ್ದಾರೆ.

**ಮೂಲ:** ಇನಿ ಭಗವದನುಭವರೂಪಮಾನ ಪರಮಪುರುಷಾರ್ಥ ಲಕ್ಷಣ ಮೋಕ್ಷಮಾವದು - ಪ್ರಾರಬ್ಧ ಕರ್ಮಶೇಷಮಾಯ್, ಅವಶ್ಯಮನು ಭಾವ್ಯಮಾನ ಪುಣ್ಯಪಾಪಂಗಳ್ ನಶಿತ್ತು 'ಅಸ್ತಿ ಜಾಯತೇ ಪರಿಣಮತೇ, ವಿವರ್ಧತೇ, ಅಪಕ್ಷೀಯತೇ, ವಿನಶ್ಯತಿ ಎನ್ಗಿರಪಡಿಯೇ ಷಡ್ಭಾವ ವಿಕಾರಾಸ್ಪದಮಾಯ್ ತಾಪತ್ರಯಾಶ್ರಯಮಾಯ್, ಭಗವತ್ಸ್ವರೂಪತ್ತೈ ಮರೈಪ್ಪಿತ್ತು ವಿಪರೀತಜ್ಞಾನತ್ತೈ ಜನಿಪ್ಪಿಕ್ಕ ಕ್ಕಡವದಾಯ್, ಸಂಸಾರವರ್ಧಕಮಾನ ಸ್ಥೂಲ ಶರೀರತ್ತೈ ಉಪೇಕ್ಷೆಯೊಡೇ ಪೊಹಟ್ಟಿ;

ಪುರುಷಾರ್ಥಗಳಲ್ಲಿ ಐದನೆಯದಾಗಿ ಹೇಳಲ್ಪಟ್ಟ 'ಮೋಕ್ಷ'ದ ಉತ್ಕೃಷ್ಟವಾದ ವಿಧವನ್ನು ವಿಸ್ತರವಾಗಿ ಈ ಸೂತ್ರದಲ್ಲಿ ನಿರೂಪಿಸುತ್ತಾರೆ.

ಇನ್ನು ಭಗವದನುರೂಪವಾದ ಪರಮ ಪುರುಷಾರ್ಥ ಲಕ್ಷಣ

ಮೋಕ್ಷವೆಂದರೆ - ಎಂದು ಆರಂಭಿಸುತ್ತಾರೆ. ಇಲ್ಲಿ ಈ ಮೋಕ್ಷವನ್ನು 'ಪರಮಪುರುಷಾರ್ಥ'ವೆಂದು ವಿಶೇಷಿಸಿ ತಿಳಿಸಿರುವುದರಿಂದ ಉಳಿದ ನಾಲ್ಕಕ್ಕಿಂತ ಇದು ಉತ್ಕೃಷ್ಟವಾದದ್ದು ಎಂಬುದು ಸೂಚಿತವಾಗಿದೆ. ಈ ಭಗವದನುರೂಪಮೋಕ್ಷ ಪುರುಷಾರ್ಥವೆಂದರೆ - ಪ್ರಾರಬ್ಧಕರ್ಮದ ಉಳಿಕೆಯಾಗಿ, ಅವಶ್ಯಕವಾಗಿ ಅನುಭವಿಸಿಯೇ ತೀರಬೇಕಾದ ಪುಣ್ಯಪಾಪಗಳೆಲ್ಲ ನಾಶವಾಗಿ; ಆಸ್ತಿ-ಇದೆ, ಜಾಯತೇ -ಹುಟ್ಟುತ್ತದೆ; ಪರಿಣಮತೇ - ಮಾರ್ಪಾಡು ಹೊಂದುತ್ತದೆ; ವಿವರ್ಧತೇ - ವರ್ಧಿಸುತ್ತದೆ; ಅಪಕ್ಷೀಯತೇ - ಕ್ಷೀಣಿಸುತ್ತದೆ; ವಿನಶ್ಯತಿ - ನಾಶವಾಗುತ್ತದೆ; ಎಂಬಂತೆ ಆರುವಿಧವಾದ ವಿಕಾರಗಳಿಗೆ ಆಸ್ಪದವಾಗಿ; ಆದಿಭೌತಿಕ, ಆದಿದೈವಿಕ, ಆಧ್ಯಾತ್ಮಿಕ ಎಂಬ ಮೂರು ವಿಧವಾದ ತಾಪಗಳಿಗೆ ಆಶ್ರಯವಾಗಿ, ಪರಮಾತ್ಮನ ಸ್ವರೂಪವನ್ನು ಮರೆಸಿ, ಶರೀರವೇ ಆತ್ಮಾ ಎಂಬ ವಿಪರೀತ ಜ್ಞಾನವನ್ನು ಉಂಟುಮಾಡುವಂತಹುದಾಗಿ, ಸಂಸಾರವನ್ನು ಬೆಳೆಸುವ ಸ್ಥೂಲ ಶರೀರವನ್ನು ಉಪೇಕ್ಷೆಯಿಂದ ಕೊಡವಿ ತೊರೆದು;

ಮೂಲ: ಸುಷುಮ್ನಾನಾಡಿಯಾಲೇ, ಶಿರಃಕಪಾಲತ್ತೈ ಭೇದಿತ್ತು ಪುರಪ್ಪಟ್ಟು, ಸೂಕ್ಷ್ಮ ಶರೀರತ್ತೋಡೇ ವಾನೇರ ವಳಿಪೆತ್ತು, 'ಮನ್ನುಙ್ಕಡಮ್ ಕದಿರೋನ್ ಮಂಡಲತ್ತಿನನ್ನಡುವುಳನ್ನದೋರಿಲ್ಲಿಯಿನ್ ಊಡು ಪೋಯ್'[1] ಸೂಕ್ಷ್ಮಶರೀರತ್ತೈಯುಂ, ವಾಸನಾರೇಣುವೈಯುಂ ವಿರಜಾಸ್ನಾನತ್ತಾಲೇ ಕಳಿತ್ತು,

ಸುಷಮ್ನಾ ನಾಡಿಯ ಮೂಲಕವಾಗಿ ಶಿರಃಕಪಾಲವನ್ನು ಭೇದಿಸಿ ಆ ಸ್ಥೂಲ ಶರೀರದಿಂದ ಹೊರಟು, ಸೂಕ್ಷ್ಮ ಶರೀರದ ಮೂಲಕ ನಭೋಮಂಡಲದ ದಾರಿ ಹಿಡಿದು, ಸೂರ್ಯ ಮಂಡಲದ ಮಧ್ಯದಲ್ಲಿ (ನಡುವೆ) ತೂರಿ ಹೋಗಿ ಆ ಸೂಕ್ಷ್ಮ ಶರೀರವನ್ನೂ,

ವಾಸನಾರೇಣುವನ್ನೂ (ಸ್ಥೂಲ ಶರೀರದೊಡನಿದ್ದ ಸಂಬಂಧ) ಆ ಪರಮಪದದಲ್ಲಿರುವ ದಿವ್ಯವಾದ ವಿರಜಾನ ನದಿಯಲ್ಲಿನ ಸ್ನಾನದಿಂದ ಕಳೆದು;

ಮೂಲ: ಸಕಲ ತಾಪಂಗಳುಂ ಆರುಮ್ಪಡಿ, ಅಮಾನವಕರಸ್ಪರ್ಶಮುಂ ಪೆತ್ತು, ಶುದ್ಧ ಸತ್ತ್ವಾತ್ಮಕಮಾಯ್, ಪಂಚೋಪನಿಷಣ್ಮಯಮಾಯ್, ಜ್ಞಾನಾನಂದ ಜನಕಮಾಯ್, ಭಗವದನುಭವೈಕ ಪರಿಕರಮಾಯ್, 'ಒಳಿಕ್ಕೊಂಡ ಶೋದಿಯುಮಾಯ್'[2] ಇರುಕ್ಕಿರ ಅಪ್ರಾಕೃತ ವಿಗ್ರಹತ್ತೈಪ್ಪೆತ್ತು

ಸಕಲತಾಪಗಳೂ ನೀಗುವಂತೆ, ವಿರಜಾನದಿಯಲ್ಲಿರುವ ಅಮಾನವನ ಕರಸ್ಪರ್ಶವನ್ನು ಪಡೆದು, ಶುದ್ಧಸತ್ತ್ವದಿಂದಾದ, ಪಂಚೋಪನಿಷಣ್ಮಯ (ವಿಶ್ವಂ, ನಿವೃತ್ತಃ, ಸರ್ವ, ಪರಮೇಷ್ಠಿ, ಪುಮಾನ್ ಎಂಬ ಶುದ್ಧಸತ್ವದ ಐದು ತತ್ವಗಳಿಗೆ ಉಪನಿಷತ್ ಎಂದು ಹೆಸರು. ಅವುಗಳಿಂದಾದ ದಿವ್ಯ ದೇಹ)ವಾಗಿ, ಜ್ಞಾನ ಆನಂದಗಳನ್ನೇ ಉಂಟುಮಾಡುವಂತಹುದಾಗಿ ಭಗವದನುಭವಕ್ಕೆ ಮಾತ್ರ ಪರಿಕರವಾಗಿ, 'ಜ್ಯೋತಿರ್ಮಯ'ವಾದ ಪ್ರಾಕೃತವಲ್ಲದ ಶರೀರ ಪಡೆದು;

ಮೂಲ: 'ಮುಡಿಯುಡೈವಾನವರ್ ಮುಱೈಮುಱೈ ಎದಿರ್‌ಕೊಳ್ಳ'[3] ನಿರತಿಶಯಾನಂದಮಾಯಮಾನ ತಿರುಮಾಮಣಿಮಂಡಪತ್ತೈ ಪ್ರಾಪಿತ್ತು, ಲಕ್ಷ್ಮೀಸಹಿನಾಯ್, ಭೂಮಿ -ನೀಳಾನಾಯಕನಾಯ್ ವಿಲಕ್ಷಣ ವಿಗ್ರಹಯುಕ್ತನಾಯ್, 'ಕುಳುಮಿತ್ತೇವರ್ ಕುಳಾಂಗಳ್ ಕೈತೊಳಚ್ಚೋದಿವೆಳ್ಳತ್ತಿನುಳ್ಳೇ ಎಳುವದೋರುರು'[4] ವಾನ ಶ್ರೀ ವೈಕುಂಠನಾಥನ್ನೈ ನಿತ್ಯಾನುಭವಂ ಪಣ್ಣ ನಿತ್ಯಕಿಂಕರ ಸ್ವಭಾವನಾಹೈ.

ಶ್ರೀ ವೈಕುಂಠ ಲೋಕಕ್ಕೆ ನಾವೇ ಅರಸರೆಂಬಂತೆ ಕಿರೀಟವನ್ನು ತೊಟ್ಟ ನಿತ್ಯ ಸೂರಿಗಳು ಎದಿರ್ಗೊಳ್ಳಲಾಗಿ, ನಿರತಿಶಯಾನಂದವಾದ

ದಿವ್ಯಮಣಿಮಂಟಪವನ್ನು ಸೇರಿ, ಲಕ್ಷ್ಮೀಸಹಿತನಾಗಿ ಭೂಮಿ ನೀಳಾನಾಯಕನಾಗಿ, ವಿಲಕ್ಷಣ ವಿಗ್ರಹದಿಂದಿರುವ 'ನಿತ್ಯ ಸೂರಿಗಳೆಲ್ಲರೂ ಒಟ್ಟಾಗಿ ಕೂಡಿ ನಮಸ್ಕರಿಸುವ ಜ್ಯೋತಿ ಪ್ರವಾಹದ ನಡುವಿನಲ್ಲಿ ಎದ್ದುಬಂದ ದಿವ್ಯರೂಪನಾದ ಶ್ರೀ ವೈಕುಂಠನಾಥನನ್ನು ನಿತ್ಯ ಅನುಭವಿಸಿ ಅವನಿಗೇ ನಿತ್ಯಕಿಂಕರ ಸ್ವಭಾವನಾಗುವಿಕೆಯಾಗಿದೆ.

ಹೀಗೆ ಭಗವದನುಭವರೂಪಮೋಕ್ಷವು ಜೀವಾತ್ಮನ ಆತ್ಯಂಕಿಕ ವೈಭವೋಪೇತ ಪುರುಷಾರ್ಥವಾಗಿರುವುದನ್ನು ಸೂತ್ರಕಾರರು ನಿರೂಪಿಸಿದ್ದಾರೆ.

ಈ ರೀತಿ ಧರ್ಮ, ಅರ್ಥ, ಕಾಮ, ಆತ್ಮಾನುಭವ, ಭಗವದನುಭವ ಮೋಕ್ಷಗಳೆಂಬ ಐದು ವಿಧವಾದ ಪುರುಷಾರ್ಥಗಳ ಸ್ವರೂಪ ನಿರ್ಣಯವನ್ನು ಈ ಪ್ರಕರಣದಲ್ಲಿ ಮಾಡಿ ಅನುಗ್ರಹಿಸಿದ್ದಾರೆ.

|| ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ||

|| ಜೀಯರ್ ತಿರುವಡಿಹಳೇ ಶರಣಂ ||

## ಉಪಾಯ ಸ್ವರೂಪ ನಿರೂಪಣ ಪ್ರಕರಣಂ

ಅರ್ಥ ಪಂಚಕಗಳಲ್ಲಿ ನಾಲ್ಕನೆಯದಾಗಿ ಹೇಳಲ್ಪಟ್ಟ ಉಪಾಯ ಸ್ವರೂಪವನ್ನು ಈ ಪ್ರಕರಣದಲ್ಲಿ ಪ್ರತಿಪಾದಿಸುತ್ತಾರೆ.

ಮೂಲ: ಉಪಾಯಂಗಳಿಲ್ -ಕರ್ಮಯೋಗಮಾವದು-ಯಜ್ಞ-ದಾನ-ತಪೋ - ಧ್ಯಾನ - ಸಂಧ್ಯಾ - ವಂದನ - ಪಂಚಮಹಾಯಜ್ಞ - ಅಗ್ನಿಹೋತ್ರ-ತೀರ್ಥಯಾತ್ರಾ-ಪುಣ್ಯಕ್ಷೇತ್ರವಾಸ-ಕೃಚ್ಛ್ರ-ಚಾಂದ್ರಾಯಣ-ಪುಣ್ಯನದೀಸ್ನಾನ -ವ್ರತ-ಚಾತುರ್ಮಾಸ್ಯ-ಫಲಮೂಲಾಶನ-

ಶಾಸ್ತ್ರಾಭ್ಯಾಸ-ಸಮಾರಾಧನ-ಜಪ-ತರ್ಪಣಾದಿ ಕರ್ಮಾನು ಷ್ಠಾನತ್ತಾಲ್ ವನ್ದ ಕಾಯಶೋಷಣತ್ತಾಲ್ ಪಾಪನಾಶಂ ಪಿರನ್ದು;

ಉಪಾಯಗಳಲ್ಲಿ ಕರ್ಮಯೋಗವೆಂದರೆ 'ಯಜ್ಞ, ದಾನ ..... ತರ್ಪಣಾದಿ'ಗಳಾದ ಸೂತ್ರದಲ್ಲಿ ಹೇಳಲ್ಪಟ್ಟ ಕರ್ಮಾನುಷ್ಠಾನದಿಂದ ಏರ್ಪಟ್ಟ ಶರೀರ ಶೋಷಣೆಯಿಂದ ಪಾಪನಾಶವಾಗಿ

ಮೂಲ: ಅತ್ತಾಲ್ ಇಂದ್ರಿಯದ್ವಾರಾ ಪ್ರಸರಿಕ್ಕಿರ ಧರ್ಮಭೂತಜ್ಞಾನತ್ತುಕ್ಕು ಶಬ್ದಾದಿಹಳ್ ವಿಷಯಮಲ್ಲಾಮೈಯಾಲೇ ವಿಷಯ ಸಾಪೇಕ್ಷೈ ಪಿರನ್ದು ಯಮ - ನಿಯಮ - ಆಸನ - ಪ್ರಾಣಾಯಾಮ - ಪ್ರತ್ಯಾಹಾರ- ಧ್ಯಾನ - ಧಾರಣಾ - ಸಮಾಧಿರೂಪಮಾನ ಅಷ್ಟಾಂಗಯೋಗ ಕ್ರಮತ್ತಾಲೇ ಯೋಗಾಭ್ಯಾಸ ಕಾಲತ್ತಿಳವುಂ ಜ್ಞಾನತ್ತುಕ್ಕು ಆತ್ಮಾವೈ ವಿಷಯಮಾಕ್ಕುಹೈ.

ಆದರಿಂದ ಇಂದ್ರಿಯಗಳ ಮೂಲಕ ಪ್ರಸಾರವಾಗುವ ಆತ್ಮನ ಧರ್ಮಭೂತಜ್ಞಾನಕ್ಕೆ ಶಬ್ದ, ರೂಪ, ರಸ, ಸ್ಪರ್ಶ, ಘ್ರಾಣಗಳು ವಿಷಯವಲ್ಲದ್ದರಿಂದ. ವಿಷಯ ಬೇಕೆನ್ನುವ ಅಪೇಕ್ಷೆ ಏರ್ಪಟ್ಟು ಯಮನಿಯಮಾದಿ ಅಷ್ಟಾಂಗಯೋಗ ಕ್ರಮದಿಂದ ಯೋಗಾಭ್ಯಾಸ ಕಾಲಪರ್ಯಂತ ಆ ಜ್ಞಾನಕ್ಕೆ ಜೀವಾತ್ಮನನ್ನು ವಿಷಯವಾಗಿಸುವಿಕೆಯಾಗಿದೆ. ಇದೇ ಕರ್ಮಯೋಗ ಎನಿಸಲ್ಪಡುತ್ತದೆ. ''ಧಾರಣಾ-ಧ್ಯಾನ'' ಎಂಬುದು ಸಿದ್ಧಾಂತ ಕ್ರಮ.

ಮೂಲ: ಇದು ತಾನ್ ಜ್ಞಾನಯೋಗತ್ತುಕ್ಕು ಸಹಕಾರಿಯಾಯ್, ಐಶ್ವರ್ಯತ್ತುಕ್ಕು ಪ್ರಧಾನ ಸಾಧನ ಮಾಯಿರುಕ್ಕುಂ.

ಈ ಕರ್ಮಯೋಗವು ಜ್ಞಾನಯೋಗಕ್ಕೆ ಸಹಕಾರಿಯಾಗಿ, ಐಶ್ವರ್ಯವನ್ನು ಪಡೆಯಲು ಮುಖ್ಯವಾದ ಸಾಧನವಾಗಿದೆ.

ಮೂಲ: ಜ್ಞಾನಯೋಗಮಾವದು - ಇಪ್ಪಡಿಯೋಗಜನ್ಯಮಾನ ಜ್ಞಾನತ್ತುಕ್ಕು ಹೃದಯಕಮಲಂ, ಆದಿತ್ಯಮಂಡಲಂ - ತುಡಕ್ಕಮಾನ ಸ್ಥಲ ವಿಶೇಷಂಗಳಿಲೇ ಎಳುಂದರುಳಿ ಇರುಕ್ಕಿರ ಸರ್ವೇಶ್ವರನೈ ವಿಷಯಮಾಕ್ಕಿ.

ಉಪಾಯಗಳಲ್ಲಿ ಎರಡನೆಯದಾಗಿ ಹೇಳಲ್ಪಟ್ಟ ಜ್ಞಾನಯೋಗವನ್ನು ಈ ಸೂತ್ರದಲ್ಲಿ ವಿವರಿಸುತ್ತಾರೆ. ಜ್ಞಾನಯೋಗವೆಂದರೆ - ಹೀಗೆ ಕರ್ಮಯೋಗದಿಂದ ಹುಟ್ಟುವ ಆತ್ಮ ಜ್ಞಾನಕ್ಕೆ ಹೃದಯಕಮಲ, ಆದಿತ್ಯಮಂಡಲ, ಅಂಗುಷ್ಠ, ತೀರ್ಥ, ಕುಂಭ, ದೀಪ ಮುಂತಾದ ಸ್ಥಳ ವಿಶೇಷಗಳಲ್ಲಿ ಬಿಜಯಮಾಡಿಸಿರುವ ಪರಮಾತ್ಮನನ್ನು ವಿಷಯವಾಗಿಸಿ

ಮೂಲ : ಅವ್ವಿಷಯಂತನ್ನೈ - ಶಂಖಚಕ್ರಗದಾಧರಮಾಯ್, ಪೀತಾಂಬರ ಯುಕ್ತಮಾಯ್, ಕಿರೀಟಾದಿ ನೂಪುರಾಂತ ದಿವ್ಯಭೂಷಣಾಲಂಕೃತ ಮಾಯ್, ಲಕ್ಷ್ಮೀಸಹಿತಮಾಹವುಂ ಅನುಭವಿತ್ತು ಯೋಗಾಭ್ಯಾಸ ಕ್ರಮತ್ತಾಲೇ ಅನುಭವಕಾಲತ್ತೈ ಪೆರುಕ್ಕಿ. ಅನವರತಭಾವನಾರೂಪ ಮಾಕ್ಕುಹೈ.

(ಆ ಪರಮಾತ್ಮನನ್ನು) ಶಂಖಚಕ್ರಗದಾಧರನಾಗಿ, ಪೀತಾಂಬರ ಧಾರಿಯಾಗಿ, ಕಿರೀಟಮಕುಟ ಚೂಡಾ ವತಂಸ ಮಕರಕುಂಡಲ ಗ್ರೈವೇಯಕ ಹಾರ ಶ್ರೀ ವತ್ಸಕೌಸ್ತುಭ ಮುಕ್ತಾದಾಮ ಉದರಬಂಧನ ನೂಪುರಾದಿ ದಿವ್ಯಭೂಷಣಗಳಿಂದ ಅಲಂಕೃತನಾಗಿ, ಶ್ರೀ ಮಹಾಲಕ್ಷ್ಮೀ ಸಮೇತನಾಗಿ ಅನುಭವಿಸಿ (ಧ್ಯಾನಮಾಡಿ) ಅಷ್ಟಾಂಗ ಯೋಗಾಭ್ಯಾಸ ಕ್ರಮದಿಂದ ಧ್ಯಾನಕಾಲವನ್ನು ಅಧಿಕಗೊಳಿಸಿ ನಿರಂತರ ಅದರ ಭಾವನೆಯಲ್ಲೇ ಇರುವಂತಾಗುವಿಕೆ.

ಮೂಲ: ಇದುತಾನ್ ಭಕ್ತಿಯೋಗತ್ತುಕ್ಕು ಸಹಕಾರಿಯುಮಾಯ್, ಕೈವಲ್ಯಮೋಕ್ಷತ್ತುಕ್ಕುಂ ಪ್ರಧಾನ ಸಾಧನಮಾಯಿರುಕ್ಕುಂ.

ಈ ಜ್ಞಾನಯೋಗವು ಭಕ್ತಿಯೋಗಕ್ಕೆ ಸಹಕಾರಿಯಾಗಿಯೂ, ಕೈವಲ್ಯಮೋಕ್ಷಕ್ಕೂ ಪ್ರಮುಖ ಸಾಧನವಾಗಿಯೂ ಇರುತ್ತದೆ. ಈ ರೀತಿಯಾಗಿ ಜ್ಞಾನಯೋಗದ ಸ್ವರೂಪವು ಹೇಳಲ್ಪಟ್ಟಿತು.

ಮೂಲ: ಭಕ್ತಿಯೋಗಮಾವದು - ಇಪ್ಪಡಿ ತೈಲಧಾರಾವದವಿಚ್ಛಿನ್ನ ಸ್ಮೃತಿ ಸಂತಾನರೂಪಮಾನ ಅನುಭವಂ ಪ್ರೀತಿರೂಪಾಪನ್ನಮಾಹೈಯುಂ, ಅದು ತನ್ನೈ ಅರಿಯಪ್ಪಾರ್‌ತ್ತಾಲ್, ಪ್ರಾರಬ್ಧಕರ್ಮಂಕಳಿಹೈಯುಂ, ಸಾಧನ ಸಾಧ್ಯಂಗಳೈ ಅನುಸಂಧಿತ್ತು, ಅದಿನುಡ್ಯೆಯ ಸಂಕೋಚವಿಕಾಸಮಾಮ್ಬಡಿ ಪರಿಣಮಿಪ್ಪಿಕ್ಕೈಯುಂ.

ಈ ರೀತಿ ತೈಲಧಾರೆಯಂತೆ ಸ್ಮೃತಿ ಪರಂಪರೆಯ ರೂಪವಾಗಿರುವ ಧ್ಯಾನವು ಭಗವತ್ ಪ್ರೀತಿಯ ರೂಪವನ್ನು ತಾಳುವಿಕೆಯು, ಅದನ್ನು ವಿಮರ್ಶಿಸುವುದರ ಮೂಲಕ ಪ್ರಾರಬ್ಧ ಕರ್ಮಗಳನ್ನು ಯಾವಾಗ ಕಳೆಯುತ್ತದೆ ಎಂಬುದನ್ನೂ, ಸಾಧನವಾದ ಭಕ್ತಿಯೋಗವನ್ನು ಅದರಿಂದ ತಾವು ಅಪೇಕ್ಷಿಸುವ ಫಲಗಳನ್ನು ಅನುಸಂಧಾನಮಾಡಿ ಆ ಫಲಕ್ಕೆ ಅನುಗುಣವಾಗಿ ಭಕ್ತಿಯನ್ನು ಸಂಕೋಚ ವಿಕಾಸಗಳ ಮೂಲಕ ಪರಿಣಮಿಸುವಂತೆ ಮಾಡುವಿಕೆ.

ಮೂಲ: ಪ್ರಪತ್ತ್ಯುಪಾಯಮಾವದು - ಇಪ್ಪಡಿ ಕರ್ಮಜ್ಞಾನ ಸಹಕೃತಮಾನ ಭಕ್ತಿಯೋಗತ್ತಿಲ್ ಅಶಕ್ತರ್‌ಕ್ಕುಂ, ಅಪ್ರಾಪ್ತರುಕ್ಕುಂ ಸುಕರಮಾಯ್, ಶ್ರೀಘ್ರಫಲಪ್ರದಮುಮಾಯ್, ಉಪಾಯಂ ಸಕೃತ್ತಾಹೈಯಾಲೇ, ಉಪಾಯನುಷ್ಠಾನಸಮನಂತರಂ ಉಣ್ಡಾಹಕ್ಕಡವದಾನ ಭಗವದ್ವಿಷಯಾನುಭವಂಗಳೆಲ್ಲಾಂ ಪ್ರಾಪ್ಯಕೋಟಿ ಘಟಿತಂಗಳಾಹೈಯಾಲೇ, ಸ್ವರೂಪಾನುರೂಪಮಾಯಿರುಕ್ಕುಂ.

ಉಪಾಯಗಳಲ್ಲಿ ನಾಲ್ಕನೆಯದಾಗಿ ಹೇಳಲ್ಪಟ್ಟ ಪ್ರಪತ್ತಿ ಉಪಾಯವನ್ನು ಇಲ್ಲಿ ವಿವರಿಸಲಾಗಿದೆ.

ಪ್ರಪತ್ತಿ ಉಪಾಯವೆಂದರೆ ; - ಕರ್ಮ ಜ್ಞಾನಗಳ ಸಹಕಾರದಿಂದ ಏರ್ಪಡುವ ಭಕ್ತಿಯೋಗವನ್ನು ಅನುಷ್ಠಾನ ಮಾಡಲು ಅಶಕ್ತರಾಗಿಯೂ, ಪ್ರಾಪ್ತಿ ಇಲ್ಲದವರಾಗಿಯೂ ತ್ರೈವರ್ಣಿಕರಲ್ಲದೆ, (ವೇದಾಧ್ಯಯನಾದಿ ಗಳಿಗೆ ಅರ್ಹರಲ್ಲದವರಾಗಿ) ಇರುವವರಿಗೆ ಅತ್ಯಂತ ಸುಲಭ ವಾಗಿಯೂ, ಶೀಘ್ರವಾಗಿ ಫಲವನ್ನು ನೀಡುವಂತಹುದಾಗಿಯೂ, ಇದರ ಅನುಷ್ಠಾನವು ಒಂದೇ ಒಂದು ಬಾರಿಯಾದ್ದರಿಂದ, ಈ ಪ್ರಪತ್ತಿಯನ್ನು ಅನುಷ್ಠಾನಮಾಡಿದ ನಂತರ ಏರ್ಪಡುವಂತಹ ಭಗವದನುಭವಗಳೆಲ್ಲಾ ಫಲದಲ್ಲೇ ಸೇರಿಬಿಡುವುದರಿಂದಲೂ ಈ ಪ್ರಪತ್ತಿಯು ಜೀವಾತ್ಮನ ಸ್ವರೂಪಕ್ಕೆ ಅನುಗುಣವಾದಂತಹುದಾಗಿದೆ.

ಮೂಲ: ಇದುದಾನ್ - 'ಆರ್ತಪ್ರಪತ್ತಿ' ಎನ್ರುಂ 'ದೃಪ್ತರೂಪ ಪ್ರಪತ್ತಿ' ಎನ್ರುಂ ಇರುಣ್ಡುಪಡಿ ಪಟ್ಟಿರುಕ್ಕುಂ.

ಈ ಪ್ರಪತ್ತಿಯು 'ಆರ್ತಪ್ರಪತ್ತಿ' ಮತ್ತು 'ದೃಪ್ತಪ್ರಪತ್ತಿ' ಎಂಬುದಾಗಿ ಎರಡು ವಿಧವಾಗಿದೆ.

ಮೂಲ: ಆರ್ತಮಾನ ಪ್ರಪತ್ತಿಯಾನದು-ನಿರ್ಹೇತುಕ ಭಗವತ್ಕಟಾಕ್ಷ ಮಡಿಯಾಹ ಶಾಸ್ತ್ರಾಭ್ಯಾಸತ್ತಾಲುಂ, ಸದಾಚಾರ್ಯೋಪದೇಶತ್ತಾಲುಂ, ಯಥಾಜ್ಞಾನಂ ಪಿರನ್ದವಾರೇ.

ಆರ್ತಪ್ರಪತ್ತಿ ಎಂದರೆ, ನಮ್ಮ ಯಾವ ಪ್ರಯತ್ನವೂ ಇಲ್ಲದೆ ಪರಮಾತ್ಮ ನಿರ್ಹೇತುಕವಾಗಿ ಮಾಡಿದ ಕಟಾಕ್ಷದ ಫಲವಾಗಿ ಶಾಸ್ತ್ರಾಭ್ಯಾಸದಿಂದಲೂ, ಸದಾಚಾರ್ಯದ ಉಪದೇಶದಿಂದಲೂ ಜೀವಾತ್ಮ ಪರಮಾತ್ಮಾದಿಗಳ ಯಥಾಜ್ಞಾನ ಏರ್ಪಟ್ಟಾಗ

ಮೂಲ: ಭಗವದನುಭವತ್ತುಕ್ಕು ವಿಪರೀತಮಾನ ದೇಹಸಂಬಂಧಮುಂ, ದೇಶಸಂಬಂಧವಮುಂ, ದೈಶಿಕರುಡೈಯ ಸಹವಾಸವಮುಂ,

ದುಸ್ಸಹಮಾಯ್, ಭಗವದನುಭವತ್ತುಕ್ಕು ಏಕಾಂತಮಾಮ್ಬಡಿ ವಿಲಕ್ಷಣಮಾನ ದೇಹತ್ತೈಯುಂ. ದೇಶತ್ತೈಯುಂ, ದೈಹಿಕರ್ಕೈಯುಂ ಪ್ರಾಪಿಕ್ಕೈಯಿಲ್ ತ್ವರೈವಿಂಜಿ.

ಭಗವದನುಭವಕ್ಕೆ ವಿರೋಧಿಯಾದ ದೇಹ ಸಂಬಂಧವೂ, ವಾಸಿಸುವ ಸ್ಥಳವೂ, ಮಾರ್ಗದರ್ಶಿಗಳೂ, ಸಹವಾಸವೂ ಸಹಿಸಲು ಅಸಾಧ್ಯವಾಗಿ, ಭಗವದನುಭವಕ್ಕೆ ಏಕಾಂತವಾಗಿರುವಂತಹ ವಿಲಕ್ಷಣವಾದ ದೇಹವನ್ನೂ ವಿಲಕ್ಷಣ ದೇಶವನ್ನೂ ವಿಲಕ್ಷಣರಾದ ಆದೇಶ ವಾಸಿಗಳನ್ನೂ ಪಡೆಯುವುದರಲ್ಲಿ ಆತುರವು ಅತಿಯಾಗಿ,

ಮೂಲ: 'ಓಯುಮೂಪ್ಪು ಪಿರುಪ್ಪು ಇರಪ್ಪು ಪ್ಪಿಣಿ ವೀಯುಮಾರುಶೆಯ್ವಾನ್ ತಿರುವೇಂಗಡತ್ತಾಯನ್' [1]ಆಹೈಯಾಲೇ 'ತಿರುವೇಂಗಡತ್ತಾನೇ ಪುಹರೊನ್ರಿಲ್ಲಾ ಅಡಿಯೇನ್'[2] 'ವೇಂಗಡತ್ತುರೈವಾರ್ಕ್ಕು ನಮಃ'[3] ಎನ್ರು ಪೂರ್ಣಪ್ರಪತ್ತಿ ಪಣ್ಣಿ 'ಪಲನೀಕಾಟ್ಟಿಪ್ಪಡುಪ್ಪಾಯೋ'[4] 'ಇನ್ನುಂ ಕೆಡುಪ್ಪಾಯೋ'[5] 'ಕರೈ ಏರಿ ಇಳೈತ್ತಿರುನ್ದೇನ್'[6] 'ಇನಿ ಅಡೈಯವರುಳಾಯ್';[7] ತಿರುವಾಣೈ ನಿನ್ನಾಣೈಕಂಡಾಯ್'[8] 'ಇನಿ ನಾನ್ ಪೋಹಲೊಟ್ಟೇನ್'[9] ಎನ್ರು (ತಡುತ್ತುಂ) ವಳೈತ್ತುಂ ಪೆರುಹೈ.

'ಮುಪ್ಪು, ಜನನ, ಮರಣ, ವ್ಯಾಧಿಗಳನ್ನು ನಾಶಮಾಡುವ ತಿರುಮಲೈಯಲ್ಲಿರುವವನು'[1] 'ಎಂಬುದರಿಂದ 'ಹೇ ತಿರುವೇಂಗಡತ್ತಾನೇ ನಿನ್ನ ಬಿಟ್ಟರೆ ಬೇರೆ ಗತಿಯಿಲ್ಲವಾವನು ಈ ದಾಸ'[2] ಎಂದೂ 'ತಿರುಮಲೈಯಲ್ಲಿರುವವನಿಗೆ ನಮೋ ನಮಃ'[3] ಎಂಬುದಾಗಿ ಪೂರ್ಣವಾದ ಪ್ರಪತ್ತಿಮಾಡಿಯೂ 'ಹಲವಾರನ್ನು ತೋರಿ ಪಾಡುಪಡಿಸುವೆಯಾ';[4] ನನ್ನನ್ನು ಇನ್ನೂ ಕೆಡಿಸುವೆಯಾ?[5] ಎಂದು ದಡವನ್ನು ಏರಿಯೂ ಜಾರಿದೆ,[6] ಇನ್ನಾದರೂ ಪಡೆಯುವಂತೆ ಅನುಗ್ರಹಿಸು;[7] ಇಲ್ಲದಿದ್ದರೆ ನಿನ್ನ ದೇವಿಯಾದ ಮಹಾಲಕ್ಷ್ಮಿಯ ಮೇಲೆ

ಆಣೆ; ನಿನ್ನ ಮೇಲೆ ಆಣೆ ತಿಳಿಯಿತೇ?[8] ಇನ್ನು ನಾನು ನಿನ್ನನ್ನು ಹೋಗಲು ಬಿಡಲಾರೆ?[9] ಎಂಬುದಾಗೆಲ್ಲಾ ತಡೆದೂ, ಸುತ್ತಿಸುತ್ತಿ ಬಂದೂ, ಫಲವನ್ನು ಪಡೆಯುವಿಕೆ.

ಮೂಲ: ದೃಪ್ತ ರೂಪಪ್ರಪತ್ತಿಯಾವದು - ಶರೀರಾಂತರ ಪ್ರಾಪ್ತಿಯಿಲುಂ, ಸ್ವರ್ಗನರಕಾನುಭವಂಗಳಿಲುಂ ವಿರಕ್ತಿಯುಂ ಭೀತಿಯುಂ ಪಿರನ್ದು ಅದಿನುಡೈಯ ನಿವೃತ್ತಿಕ್ಕುಂ, ಭಗವತ್ಪ್ರಾಪ್ತಿಕ್ಕುಂ ಉರುಪ್ಪಾಹ, ಸದಾಚಾರ್ಯೋಪದೇಶಕ್ರಮತ್ತಾಲೇ ಉಪಾಯಸ್ವೀಕಾರಂ ಪಣ್ಣೆ.

ದೃಪ್ತರೂಪ್ರಪತ್ತಿ ಎಂದರೆ - ಈ ಜನ್ಮದ ಮುಕ್ತಾಯದ ನಂತರ ಬೇರೆ ಶರೀರ ಏರ್ಪಡುತ್ತದಲ್ಲಾ, ಸ್ವರ್ಗ ಅಥವಾ ನರಕಗಳಲ್ಲಿ ಅನುಭವಿಸಬೇಕಲ್ಲಾ ಎಂಬುದರಿಂದ - ಸ್ವರ್ಗಾದಿಗಳಲ್ಲಿ ವಿರಕ್ತಿಯೂ, ನರಕಾನುಭವದಲ್ಲಿ ಭೀತಿಯೂ ಏರ್ಪಟ್ಟು, ಅದನ್ನು ನಿವೃತ್ತಿ ಮಾಡಿಕೊಳ್ಳಲೂ, ಪರಮಾತ್ಮನನ್ನು ಪಡೆಯುವುದಕ್ಕೆ ಅನುವಾಗಿಯೂ ಸದಾಚಾರ್ಯರಿಂದ ಉಪದೇಶಕ್ರಮದಲ್ಲಿ ಪ್ರಪತ್ತಿ ಎಂಬ ಉಪಾಯ ಸ್ವೀಕಾರವನ್ನು ಮಾಡಿ

ಮೂಲ: ವಿಪರೀತ ವೃತ್ತಿ ನಿವೃತ್ತರಾಯ್, ವೇದವಿಹಿತಮಾನ ವರ್ಣಾಶ್ರಮಧರ್ಮಮುಂ, ಭಗವದ್ಭಾಗವತ ಕೈಂಕರ್ಯಮುಂ ಮನೋವಾಕ್ಕಾಯಂಗಳಾಲೇ ಯಥಾಬಲಂ ಅನುಷ್ಠಿತ್ತು.

ಮಾಡಬಾರದ್ದನ್ನು ಮಾಡುವಿಕೆ, ಮಾಡಲೇಬೇಕಾದ್ದನ್ನು ಬಿಡುವಿಕೆ ಮುಂತಾದ ವಿಪರೀತ ಪ್ರಪತ್ತಿಗಳನ್ನು ಬಿಟ್ಟು, ವೇದವಿಹಿತವಾದ ವರ್ಣಾಶ್ರಮಧರ್ಮವನ್ನೂ, ಭಗವದ್ಭಾಗವತ ಕೈಂಕರ್ಯಗಳನ್ನೂ ಮಾನಸಿಕ ವಾಚಿಕ ಕಾಯಿಕವಾಗಿ ಯಥಾಶಕ್ತಿ ಅನುಷ್ಠಾನಮಾಡಿ;

ಮೂಲ: ಈಶ್ವರನ್ ಶೇಷಿಯಾಯ್, ನಿಯಂತಾವಾಯ್, ಸ್ವಾಮಿಯಾಯ್, ಶರೀರಿಯಾಯ್, ವ್ಯಾಪಕನಾಯ್, ಧಾರಕನಾಯ್, ರಕ್ಷಕನಾಯ್, ಭೋಕ್ತಾವಾಯ್, ಸರ್ವಜ್ಞನಾಯ್, ಸರ್ವಶಕ್ತನಾಯ್, ಸರ್ವಸಂಪೂರ್ಣನಾಯ್, ಅವಾಪ್ತಸಮಸ್ತಕಾಮನಾಯ್ ಇರುಕ್ಕಿರ ಆಕಾರತ್ತೈಯುಂ ಅನುಸಂಧಿತ್ತುಕ್ಕೊಂಡು;

ಪರಮಾತ್ಮನು ಶೇಷಿಯಾಗಿ, ನಿಯಮಿಸುವವನಾಗಿ, ಸ್ವಾಮಿಯಾಗಿ, ಈ ಆತ್ಮನನ್ನು ಶರೀರವಾಗುಳ್ಳ ಶರೀರಿಯಾಗಿ, ಎಲ್ಲವೂ ವ್ಯಾಪ್ಯವಾಗಿ ಅವನು ವ್ಯಾಪಕನಾಗಿ, ಧಾರಕನಾಗಿ, ರಕ್ಷಕನಾಗಿ, ಭೋಕ್ತಾ ಆಗಿ ಸರ್ವಜ್ಞನಾಗಿ, ಪರಿಪೂರ್ಣನಾಗಿ, ಅವಾಪ್ತಸಮಸ್ತಕಾಮನಾಗಿರುವ (ಪರಮಾತ್ಮನ) ಆಕಾರವನ್ನು ಅನುಸಂಧಾನಮಾಡುತ್ತಾ.

ಮೂಲ: 'ಕಳೈವಾಯ್‌ತುನ್ಬಂ ಕಳೆಯಾದೊಳಿವಾಯ್ ಕಳೈಹಣ್ ಮತ್ತಿಲೇನ್'[10] ಎನ್ರು ಉಪಾಯತ್ತಿಲ್ ಸರ್ವಭಾರಂಗಳೈಯುಂ ಅವನ್‌ಪಕ್ಕಲಿಲೇ ಪೊಹಟ್ಟು ನಿರ್ಭರನಾಯಿರುಕ್ಕೈ.

'ನನ್ನ ದುಃಖವನ್ನು ಕಳೆಯುವಿಯಾದರೆ ಕಳೆ. ಇಲ್ಲದಿದ್ದರೆ ಎಲ್ಲಾದರೂ ಹೋಗು. ಆದರೆ ಕಳೆಯುವ ಮತ್ತೊಬ್ಬರನ್ನು ನಾನು ಕಾಣೆ' ಎಂಬಂತೆ ಉಪಾಯಭೂತವಾದ ಪರಮಾತ್ಮನಲ್ಲಿ ಸಕಲಭಾರವನ್ನೂ ವಹಿಸಿಟ್ಟು ನಿಶ್ಚಿಂತೆಯಿಂದ ಇರುವಿಕೆಯಾಗಿದೆ.

ಹೀಗೆ 'ಆರ್ತಪ್ರಪತ್ತಿ' ಭಗವದ್ವಿರಹವನ್ನು ಒಂದರೆಕ್ಷಣವೂ ಸಹಿಸಲಾರದೆ ಪರಮಾತ್ಮನನ್ನು ಕಾಡಿಬೇಡಿ ಕೂಡಲೇ ತ್ವರೆಯಿಂದ ಭಗವಂತನನ್ನು ಪಡೆಯುವಿಕೆಯಾದರೆ. ಶರೀರಾವಸಾನ ಪರ್ಯಂತ ಶಾಸ್ತ್ರೋಕ್ತ ಕ್ರಮದಲ್ಲಿ ಭಗವದ್ಭಾಗವತ ಸೇವೆ ಮಾಡಿಕೊಂಡು ಪರಮಾತ್ಮನಾದ ಉಪಾಯವನ್ನೇ ನಂಬಿ ಬೇರಾವ ಪ್ರಯತ್ನವನ್ನೂ

ಮಾಡದೆ ಭಗವದನುಗ್ರಹ ಏರ್ಪಡುವವರೆಗೂ ಕಾದ ಭಗವದನುಭವವನ್ನು ಪಡೆಯುವಿಕೆ ದೃಪ್ತರೂಪಪ್ರಪತ್ತಿಯಾಗಿದೆ.

ಈ ರೀತಿ ಪ್ರಪತ್ತಿ ಉಪಾಯವು ವಿವರಿಸಲ್ಪಟ್ಟಿತು.

ಮೂಲ: ಆಚಾರ್ಯಾಭಿಮಾನವದು - ಇವ್ವೈಯೊನ್ರುಕ್ಕುಂ ಶಕ್ತನನ್ರಿಕ್ಕೇ ಇರುಪ್ಪಾನೊರುವನ್ನೈಕ್ಕುರಿತ್ತು, ಇವನುಡ್ಯೆಯ ಇಳವ್ವೈಯುಂ, ಇವನ್ನೈಪ್ಪೆತ್ತಾಲ್ ಈಶ್ವರನುಕ್ಕುಂಡಾನ ಪ್ರೀತಿಯ್ಯೈಯುಂ ಅನುಸಂಧಿತ್ತು ಸ್ತನಂಧಯ ಪ್ರಜೈಕ್ಕು ವ್ಯಾಧಿ ಉಂಡಾನಾಲ್, ಅದು ತನ್ ಕುಲ್ಯೆಯಾಹ ನಿನ್ನೈತ್ತು ಔಷಧ ಸೇವ್ವೈಪ್ಪಣ್ಣುಂ ಮಾತಾವ್ವೈಪ್ಪೋಲೇ.

ಉಪಾಯಗಳಲ್ಲಿ ಐದನೆಯದಾಗಿ ಹೇಳಲ್ಪಟ್ಟ ಆಚಾರ್ಯಾಭಿಮಾನವನ್ನು ಇಲ್ಲಿ ಪ್ರಸ್ತಾಪಿಸುತ್ತಾರೆ. ಆಚಾರ್ಯಭಿಮಾವೆಂದರೆ - ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ಪ್ರಪತ್ತಿಯೋಗ ಇವುಗಳಾವುದನ್ನು ಅನುಷ್ಠಿಸಲೂ ಶಕ್ತಿ ಇಲ್ಲದೆ ಇರುವವನೊಬ್ಬನನ್ನು ಕುರಿತು - ಇಂತಹ ಚೇತನನ ದುಸ್ಥಿತಿಯನ್ನೂ, ಈ ಚೇತನನ್ನು ಪಡೆದರೆ ಪರಮಾತ್ಮನಿಗೆ ಏರ್ಪಡುವ ಪ್ರೀತಿಯನ್ನೂ ಭಾವಿಸಿ ಹಾಲು ಕುಡಿಯುವ ಮಗುವಿಗೆ ವ್ಯಾಧಿ ಏರ್ಪಟ್ಟರೆ ಅದನ್ನು ತನ್ನ ಅಪರಾಧವಾಗಿ ಭಾವಿಸಿ ತಾನು ಔಷಧಿ ಸೇವಿಸುವ ತಾಯಿಯಂತೆ.

ಮೂಲ: ಇವನುಕ್ಕಾಹ ತಾನ್ ಉಪಾಯಂನುಷ್ಠಾನಂ ಪಣ್ಣಿ, ರಕ್ಷಿಕ್ಕವಲ್ಲ ಪರಮದಯಾಳುವಾನ ಮಹಾಭಾಗವತನ್ ಅಭಿಮಾನತ್ತಿಲೇ ಒದುಂಗಿ;

ಈ ದುಸ್ಥಿತಿಯಲ್ಲಿರುವ ಚೇತನನಿಗಾಗಿ ತಾನು ಉಪಾಯವನ್ನು ಅನುಷ್ಠಾನಮಾಡಿ, ಇವನನ್ನು ಕಾಪಾಡಬಲ್ಲಂತಹ ಪರಮ ದಯಾಳುವಾದ ಮಹಾಭಾಗವತನ ಅಭಿಮಾನಕ್ಕೆ ಪಾತ್ರವಾಗಿ.

ಮೂಲ: 'ವಲ್ಲಪರಿಶುವರುವಿಪ್ಪರೇಲ್ ಅದುಕ್ಕಾಣ್ಣುವೋ' ಎನ್ರು ಶೊಲ್ಲುಹಿರಪಡಿಯೇ, ಸಕಲ ಪ್ರವೃತ್ತಿ ನಿವೃತ್ತಿಹಳೈಯುಂ ಅವನಿಟ್ಟ ವಳಕ್ಕಾಹ ಆಕ್ಕುಹೈ.

'ಉತ್ಕೃಷ್ಟವಾದ ಪುರುಷಾರ್ಥವನ್ನು ದೊರಕಿಸಿಕೊಟ್ಟರೆ ಪಡೆಯುತ್ತೇನೆ' ಎಂದು ಹೇಳುವಂತೆ ಸಕಲ ಪ್ರವೃತ್ತಿ, ನಿವೃತ್ತಿಗಳನ್ನೂ ಆ ಮಹಾಭಾಗವತನ ನಿಯಮನಕ್ಕೆ ಒಪ್ಪಿಸಿ ಬಿಡುವಿಕೆಯೇ ಆಚಾರ್ಯಾಭಿಮಾನವಾಗಿದೆ.

ಮೂಲ: ಎಂಬೆರುಮಾನ್, ತನಿತ್ತು ನಿತ್ಯಸಿದ್ಧಪ್ರಾಪ್ಯನಾಹ ನಿರ್ಕಚ್ಚೆಯ್ದೇ, ಸಕಲದೇವತಾಂತರ್ಯಾಮಿಯಾಯ್‌ಕ್ಕೊಂಡು, ಪ್ರಾಪ್ಯನಾಹಿರಾಪ್ಪೋಲೇ, ಇವ್ವಾಚಾರ್ಯಾಭಿಮಾನಮುಂ, ತನಿಯಾಹ ಉಪಾಯಮಾಹಚ್ಚೆಯ್ದೇಯುಂ, ಎಲ್ಲಾ ಉಪಾಯಂಗಳುಕ್ಕುಂ ಸಹಕಾರಿಯುಮಾಯ್, ಸ್ವತಂತ್ರಮುಮಾಯ್ ಇರುಕ್ಕುಂ.

ಪರಮಾತ್ಮನು, ತಾನೇ ಪ್ರತ್ಯೇಕವಾಗಿ, ನಿತ್ಯ, ಸಿದ್ಧ, ಪುರುಷಾರ್ಥವಾಗಿರುವಾಗಿವಾಗಲೂ, ಇತರ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡೂ ಪ್ರಾಪ್ಯನಾಗಿರುವಂತೆ, ಈ ಆಚಾರ್ಯಾಭಿಮಾನವೂ, ಪ್ರತ್ಯೇಕ ಉಪಾಯವಾಗಿದ್ದರೂ ಕೂಡ ಇತರ ಉಪಾಯಗಳಿಗೆ ಸಹಕಾರಿಯಾಗಿಯೂ, ಹಾಗೇ ಸ್ವತಂತ್ರ ಉಪಾಯವಾಗಿಯೂ ಇದೆ.

ಈ ರೀತಿ ಆ ಮಹಾಭಾಗವತನ ಅಭಿಮಾನಕ್ಕೆ ಪಾತ್ರವಾಗಿ ತನ್ನದೆಲ್ಲವನ್ನೂ ಅವನಲ್ಲಿ ಒಪ್ಪಿಸಿ ಬಿಡುವ ಆಚಾರ್ಯಭಿಮಾನವೆಂಬ ಉಪಾಯವು ನಿರೂಪಿಸಲ್ಪಟ್ಟಿತು.

॥ ಸ್ವಾಮಿ ಪಿಳ್ಳೈಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

# ವಿರೋಧಿ ಸ್ವರೂಪ ನಿರೂಪಣ ಪ್ರಕರಣಂ

ಅರ್ಥ ಪಂಚಕದಲ್ಲಿ ಐದನೆಯದಾಗಿ ಹೇಳಲ್ಪಟ್ಟ 'ವಿರೋಧಿಸ್ವರೂಪ'ವನ್ನು ಈ ಪ್ರಕರಣದಲ್ಲಿ ನಿರೂಪಿಸಲಾಗಿದೆ.

ಮೂಲ: ವಿರೋಧಿವರ್ಗತ್ತಿಲ್ - ಸ್ವರೂಪವಿರೋಧಿಯಾವದು - ದೇಹಾತ್ಮಾಭಿ ಮಾನಮುಂ, ಅನ್ಯಶೇಷತ್ವಮುಂ, ಸ್ವಸ್ವಾತಂತ್ರ್ಯಮುಂ.

ವಿರೋಧಿ ವರ್ಗದಲ್ಲಿ - ಮೊದಲನೆಯದಾಗಿ ಸ್ವಸ್ವರೂಪ - ಎಂದರೆ ಆತ್ಮಸ್ವರೂಪ ವಿರೋಧಿಯನ್ನು ತಿಳಿಸುತ್ತಾರೆ. ಅದು ಮೂರು ವಿಧವಾಗಿದೆ.

1) ದೇಹಾತ್ಮಾಭಿಮಾನ - ಜಡಪ್ರಕೃತಿಯಿಂದಾದ ಈ ದೇಹವನ್ನೇ ಜ್ಞಾನಸ್ವರೂಪನಾದ ಆತ್ಮಾ ಎಂದು ಅಭಿಮಾನಿಸುವಿಕೆ.

2) ಅನ್ಯಶೇಷತ್ವ - ಪರಮಾತ್ಮನಿಗೇ ಶೇಷಭೂತವಾದ ಈ ಆತ್ಮನನ್ನು ಇತರರಿಗೆ ಶೇಷಭೂತವಾದದ್ದು ಎಂದು ತಿಳಿಯುವಿಕೆ.

3) ಸ್ವಸ್ವಾತಂತ್ರ್ಯಮುಂ - ಪರಮಾತ್ಮನಿಗೇ ಮಿಸಲಾಗಿ, ಪರತಂತ್ರವಾದ ಆತ್ಮನನ್ನು ಸ್ವತಂತ್ರ ಎಂದು ತಿಳಿಯುವಿಕೆ.

ಈ ಮೂರು ಕೂಡ ಆತ್ಮನಯಥಾರ್ಥಸ್ವರೂಪದ ವಿರೋಧಿಗಳಾಗಿವೆ.

ಮೂಲ: ಪರತ್ವವಿರೋಧಿಯಾವದು - ದೇವತಾಂತರಪರತ್ವಪ್ರತಿಪತ್ತಿಯುಂ, ಸಮತ್ವಪ್ರತಿಪತ್ತಿಯುಂ, (ಕ್ಷುದ್ರದೇವತಾವಿಷಯತ್ತಿಲ್ ಶಕ್ತಿಯೋಗ ಪ್ರತಿಪತ್ತಿಯುಂ) ಅವತಾರವಿಷಯತ್ತಿಲ್ ಮಾನುಷ ಪ್ರತಿಪತ್ತಿಯುಂ, ಅರ್ಚಾವತಾರವಿಷಯತ್ತಿಲ್ ಅಶಕ್ತಿಯೋಗಪ್ರತಿಪತ್ತಿಯುಂ.

ಪರತ್ವ ವಿರೋಧಿಗಳಾವುದೆಂಬುದನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ.

ಎಂದರೆ ಪರಸ್ವರೂಪವನ್ನು ನಾವು ಯಥಾರ್ಥವಾಗಿ ತಿಳಿಯದಂತೆ ಮಾಡುವ ವಿರೋಧಿಗಳು ಎಂದು ಅರ್ಥ. ಇವು ಐದು ವಿಧವಾಗಿದೆ.

1) (ದೇವಾತಾಂತರ ಪರತ್ವ ಪ್ರತಿಪತ್ತಿಯುಂ) - ಶ್ರೀಯಃ ಪತಿಯಾದ ನಾರಾಯಣನೇ ಪರದೇವತೆ ಎಂದು ಶಾಸ್ತ್ರಗಳು ಘೋಷಿಸಿರುವಾಗ ಅದನ್ನು ನಿರ್ಲಕ್ಷಿಸಿ ಬೇರೆ ಯಾವುಯಾವುದೋ ಅವರ ದೇವತೆಗಳಿಗೆ ಪರತ್ವ ಉಂಟೆಂದು ಭಾವಿಸುವಿಕೆ.

2) (ಸಮತ್ವ ಪ್ರಪತ್ತಿಯುಂ) - ಹಾಗಿಲ್ಲದೆ ಇತರ ದೇವತೆಗಳನ್ನೂ ಶ್ರಿಯಃಪತಿಯಾದ ನಾರಾಯಣನನ್ನು ಸಮ ಎಂದು ಭಾವಿಸುವಿಕೆ.

3) ಕ್ಷುದ್ರದೇವತೆಗಳಲ್ಲಿ ಸೃಷ್ಟಿ, ಸ್ಥಿತಿ, ಲಯಕಾರಕವಾದ ಶಕ್ತಿ ಉಂಟೆಂದು ತಿಳಿಯುವಿಕೆ.

4) (ಅವತಾರವಿಷಯತ್ತಿಲ್ ಮಾನುಷಪ್ರತಿಪತ್ತಿಯುಂ) - ಪರಮಾತ್ಮನು ಶಿಷ್ಟರಕ್ಷಣೆಗಾಗಿಯೂ, ದುಷ್ಟ ಶಿಕ್ಷಣಕ್ಕಾಗಿಯೂ, ಧರ್ಮಸಂಸ್ಥಾಪನೆ ಗಾಗಿಯೂ ಅನೇಕ ಅವತಾರಗಳನ್ನು ಮಾಡುತ್ತಾನೆ. ಅದರಲ್ಲಿ ರಾಮ, ಕೃಷ್ಣಾದಿ ಮನುಷ್ಯಾವತಾರಗಳೂ ಉಂಟು. ಇಂತಹ ರಾಮ, ಕೃಷ್ಣಾದಿ ರೂಪಗಳನ್ನು ನಮ್ಮಂತೆ ಮನುಷ್ಯರನ್ನಾಗಿ ತಿಳಿಯುವಿಕೆ.

5) (ಅರ್ಚಾವತಾರ ವಿಷಯತ್ತಿಲ್ ಅಶಕ್ತಿಯೋಗ ಪ್ರತಿಪತ್ತಿಯುಂ) - ಅರ್ಚಾವತಾರದಲ್ಲಿ ಪರಮಾತ್ಮನು ಶಿಲಾ, ದಾರು, ಲೋಹಾದಿ ರೂಪದಲ್ಲಿ ಪ್ರತಿಷ್ಠಾಪನೆ ಮಾಡಲ್ಪಟ್ಟಿರುತ್ತಾನೆಯಾದ್ದರಿಂದ ಅವುಗಳಲ್ಲಿ ಪರಮಾತ್ಮತ್ವವನ್ನು ಭಾವಿಸದೆ ಕೇವಲ ಕಲ್ಲು ಮಣ್ಣೆಂದು ಭಾವಿಸಿ ಆ ವಿಗ್ರಹಗಳಿಗೆ ನಿಗ್ರಹ, ಅನುಗ್ರಹ ಶಕ್ತಿಯಿಲ್ಲವೆಂದು ತಿಳಿಯುವಿಕೆ.

ಈ ರೀತಿ ಈ ಐದು ಕೂಡ ಪರತ್ವ ವಿರೋಧಿಗಳಾಗಿವೆ.

ಮೂಲ: ಪುರುಷಾರ್ಥವಿರೋಧಿಯಾವದು - ಪುರುಷಾರ್ಥಾಂತರಂಗಳಿಲ್ ಇಚ್ಛೈಯುಂ ತಾನುಹನ್ದ ಭಗವತ್ಕೈಂಕರ್ಯಂಗಳಿಲ್ ಇಚ್ಛೈಯುಂ.

ವಿರೋಧಿವರ್ಗದಲ್ಲಿ ಮೂರನೆಯದಾದ ಪುರುಷಾರ್ಥ ವಿರೋಧಿಯನ್ನು ಈ ಸೂತ್ರದಲ್ಲಿ ಎರಡು ವಿಧ ಎಂದು ತಿಳಿಸುತ್ತಾರೆ. ಪುರುಷಾರ್ಥವಿರೋಧಿಯೆಂದರೆ - (ಪುರುಷಾರ್ಥಾಂತರಂಗಳಿಲ್ ಇಚ್ಛೈಯುಂ) ಭಗವದನುಭವ ಮೋಕ್ಷವು ಸರ್ವೋತ್ಕೃಷ್ಟವೂ, ಆತ್ಮ ಸ್ವರೂಪಕ್ಕೆ ಅನುಗುಣವೂ ಆದ ಪುರುಷಾರ್ಥವಾಗಿರುವಾಗ ಅದನ್ನು ಬಿಟ್ಟು ಇತರ ಅಲ್ಪಪುರುಷಾರ್ಥಗಳಿಗೆ ಆಸೆ ಪಡುವಿಕೆ.

(ತಾನುಹನ್ದ ಭಗವತ್ಕೈಂಕರ್ಯಂಗಳಿಲ್ ಇಚ್ಛೈಯುಂ) - ಕೈಂಕರ್ಯವೆಂದರೆ - ಕಿಂಕರನ ಸೇವೆಯನ್ನು ಸ್ವೀಕಾರ ಮಾಡುವ ಸ್ವಾಮಿಯ ಮುಖವಿಕಾಸವಾಗುವಂತೆ ಸ್ವಾಮಿ ಇಚ್ಛಿಸಿದ್ದನ್ನು ಮಾಡುವ ಸೇವೆ. ಹಾಗಿಲ್ಲದೆ ನನಗೆ ಇದನ್ನು ಮಾಡಲು ಇಚ್ಛೆ, ನಾನಿದನ್ನೇ ಮಾಡುತ್ತೇನೆ ಎಂದು ತನಗಿಷ್ಟ ಬಂದದ್ದನ್ನು ಮಾಡುವಿಕೆ.

ಈ ಮೇಲಿನ ಎರಡೂ ಕೂಡ ಭಗವಂತನ ಮುಖೋಲ್ಲಾಸವೆಂಬ ಪುರುಷಾರ್ಥದ ವಿರೋಧಿಗಳು.

ಮೂಲ: ಉಪಾಯ ವಿರೋಧಿಯಾವದು - ಉಪಾಯಾಂತರ ವೈಲಕ್ಷಣ್ಯ ಪ್ರತಿಪತ್ತಿಯುಂ, ಉಪಾಯಲಾಘವಮುಂ, ಉಪೇಯಗೌರವಮುಂ, ವಿರೋಧಿಬಾಹುಳ್ಯಯುಂ.

ವಿರೋಧಿವರ್ಗದಲ್ಲಿ ನಾಲ್ಕನೆಯದಾದ ಉಪಾಯವಿರೋಧಿಯನ್ನು ಇಲ್ಲಿ ತಿಳಿಸುತ್ತಾರೆ.

ಉಪಾಯವಿರೋಧಿ ಎಂದರೆ (ಉಪಾಯಾಂತರವೈಲಕ್ಷಣ್ಯ ಪ್ರತಿಪತ್ತಿಯುಂ) ಶರಣಾಗತಿ ಸರ್ವಶ್ರೇಷ್ಠ ಉಪಾಯವಾಗಿರುವಾಗ ಇತರ ಉಪಾಯಗಳಲ್ಲಿರುವ ವಿಶೇಷಗಳಲ್ಲಿ ಪ್ರತಿಪತ್ತಿಉಳ್ಳದ್ದಾಗಿರುವಿಕೆ.

(ಉಪಾಯ ಲಾಘವಮುಂ) (ಉಪೇಯ ಗೌರವಮುಂ) - ರಂಭೆ, ಊರ್ವಶಿಯರ ತೋಳಲ್ಲಿ ನಾಲ್ಕುದಿನ ನಲಿದಾಡಬೇಕಾದರೆ, ಎಷ್ಟೊಂದು ಕಾಯಕ್ಲೇಶವುಂಟುಮಾಡುವ ಕಠಿಣ ಯಜ್ಞಯಾಗಾದಿ ಗಳನ್ನು ಮಾಡಬೇಕಾಗಿರುವಾಗ; ಎಂದೂ ಸಂಸಾರಕ್ಕೆ ಹಿಂತಿರುಗಿಬಾರದ ಯಾವದಾತ್ಮ ಭಾವಿ ಪರಮಪದದಲ್ಲಿ ಅನುಭವಿಸುವ ಬ್ರಹ್ಮಾನಂದವನ್ನು ಪಡೆಯಲು ಏನೆಲ್ಲಾ ಮಾಡಬೇಕಾಗಿರುವಾಗ; ಈ ಕೇವಲ ಶರಣಾಗತಿ ಎಂಬ ಅಲ್ಪ ಉಪಾಯ ಸಾಕೇ ಎಂಬುದಾಗಿ ಉಪಾಯದಲ್ಲಿ ಲಘುತ್ವ, ಬುದ್ಧಿ ಉಳ್ಳದ್ದಾಗಿರುವಿಕೆ, ಮತ್ತು ಪರಮಪದಾನುಭವವೆಂಬ ಉಪೇಯದ ಹಿರಿಮೆಯಲ್ಲಿ ಗಮನ ಉಳ್ಳದ್ದಾಗಿರುವಿಕೆ.

(ವಿರೋಧಿ ಬಾಹುಳ್ಯಮುಂ) - ಈ ಶರಣಾಗತಿ ಎಂಬ ಉಪಾಯಕ್ಕೆ ಇರುವ ಅಪಾರವಾದ ವಿರೋಧಿಗಳು. ಇವೆಲ್ಲವೂ ಉಪಾಯ ವಿರೋಧಿಗಳಾಗಿವೆ.

ಮೂಲ: ಪ್ರಾಪ್ತಿವಿರೋಧಿಯಾವದು-ಪ್ರಾರಬ್ಧ ಶರೀರ ಸಂಬಂಧಮುಂ, ಅನುತಾಪ ಶೂನ್ಯಮಾಯ್, ಗುರುವಾಯ್, ಇರುನ್ನುಳ್ಳ ಭದವದ್ಭಾಗವತ ಅಪಚಾರ ಅಸಹ್ಯಾಪಚಾರಂಗಳುಂ ಇವ್ವೈ ಎಲ್ಲಾವತ್ತುಕ್ಕುಂ ವಿರೋಧಿ ಎನ್ರು ಪೇರಾಹಕ್ಕಡವದು.

ಪ್ರಾಪ್ತಿವಿರೋಧಿ ಎಂದರೆ-(ಪ್ರಾರಬ್ಧಶರೀರ ಸಂಬಂಧಮುಂ) ಪರಮಾತ್ಮಾನುಭವಕ್ಕೆ ಅತ್ಯಂತ ದೊಡ್ಡ ವಿರೋಧಿ ಎಂದರೆ ಪ್ರಾರಬ್ಧಕರ್ಮಾನುಸಾರವಾಗಿ ಏರ್ಪಟ್ಟ ಈ ಶರೀರ. ಈ ಶರೀರ ಸಂಬಂಧವೇ ವಿರೋಧಿ. ಈ ಶರೀರದಲ್ಲಿರುವಾಗ ಏರ್ಪಡುವ, ನಮ್ಮ ವಿಷಯದಲ್ಲಿ ಸ್ವಲ್ಪವೂ ಕರುಣೆಯಿಲ್ಲದ, ಘನವಾದ, ಸ್ಥಿರವಾಗಿರುವ, ಭಗವದಪಚಾರ, ಭಾಗವತಾಪಚಾರ, ಅಸಹ್ಯಾಪಚಾರಗಳು ಇವೆಲ್ಲಕ್ಕೂ ವಿರೋಧಿ ಎಂದೇ ಹೆಸರಾಗಿದೆ.

ಮೂಲ: ಅನ್ನದೋಷಂ-ಜ್ಞಾನವಿರೋಧಿಯಾಹಕ್ಕಡವದು; ಸಹವಾಸ ದೋಷಂ- ಭೋಗವಿರೋಧಿಯಾಹಕ್ಕಡವದು, ಅಭಿಮಾನಂ- ಸ್ವರೂಪವಿರೋಧಿ ಯಾಹಕ್ಕಡವದು.

ಆಹಾರ ಶುದ್ಧಿಯಿದ್ದರೆ ಸತ್ವಶುದ್ಧಿ. ಸತ್ವಶುದ್ಧಿ ಇದ್ದರೆ ಮಾತ್ರ ಒಳ್ಳೆಯ ಸ್ಥಿರವಾದ ಸ್ಮೃತಿಯಾದ್ದರಿಂದ ಅನ್ನದೋಷವಿದ್ದಲ್ಲಿ ಸುಜ್ಞಾನ ಸಾಧ್ಯವಿಲ್ಲ. ಹೀಗೆ ಅನ್ನದೋಷವು ಜ್ಞಾನವಿರೋಧಿಯಾಗಿದೆ. ಅನುಭವಕ್ಕೆ ಏಕಾಂತವಾಗಿರುವುದು ಅವಶ್ಯಕವಾದ್ದರಿಂದ ಸಹವಾಸ ದೋಷವು ಭೋಗ ವಿರೋಧಿಯಾಗಿದೆ. ನಾನು, ನನ್ನದು ಎಂಬ ಅಭಿಮಾನ ಶೇಷತ್ವ, ಪಾರತಂತ್ರ್ಯ ಸ್ವರೂಪವುಳ್ಳ ಆತ್ಮನ ಸ್ವರೂಪ ವಿರೋಧಿಯಾಗದೆ.

ಮೂಲ: ಇಪ್ಪಡಿ ಅರ್ಥಪಂಚಕಜ್ಞಾನಂ ಪಿರನ್ದು ಮುಮುಕ್ಷುವಾಯ್ ಸಂಸಾರತ್ತಿಲೇ ವರ್ತಿಕ್ಕಿರಚೇತನನುಕ್ಕು ಮೋಕ್ಷಸಿದ್ಧಿಯಳವುಂ ಸಂಸಾರಂ ಮೇಲಿಡಾದಪಡಿ ಕಾಲಕ್ಷೇಪಂ ಪಣ್ಣುಂ ಕ್ರಮಮ್.

ಅರ್ಥಪಂಚಕ ಜ್ಞಾನ ಏರ್ಪಡುವುದರ ಫಲವನ್ನೂ ಆ ಜ್ಞಾನವುಳ್ಳವರ ಜೀವನ ಕ್ರಮವನ್ನೂ ನಮ್ಮ ಮೇಲಿನ ಕೃಪೆಯಿಂದ ಸೂತ್ರಕಾರರು ಅನುಗ್ರಹಿಸಿದ್ದಾರೆ.

ಹೀಗೆ ಅರ್ಥಪಂಚಕ ಜ್ಞಾನ ಏರ್ಪಟ್ಟು, ಮುಮುಕ್ಷುವಾಗಿ ಸಂಸಾರದಲ್ಲೇ (ಮುಕ್ತಿ ದೊರೆತಿಲ್ಲವಾದ್ದರಿಂದ) ಇರುವ ಚೇತನನು ಮೋಕ್ಷ ದೊರೆಯುವವರೆಗೂ ಕಾಲಕ್ಷೇಪ ಮಾಡಬೇಕಾದ ಕ್ರಮವೇನೆಂದರೆ

ಮೂಲ: ವರ್ಣಾಶ್ರಮಾನುರೂಪಮಾಹವುಂ, ವೈಷ್ಣವತ್ವಾನುರೂಪಮಾಹವುಂ ಅಶನಾಚ್ಛಾದನಾದಿಗಳೈ ಸಂಪಾದಿತ್ತು, 'ಯದನ್ನಃ ಪುರುಷೋ ಭವತಿ, ತದನ್ನಾಸ್ತಸ್ಯ ದೇವತಾಃ'[1] ಎನ್ಗಿರಪಡಿಯೇ;

ವರ್ಣಾಶ್ರಮೋಚಿತವಾಗಿಯೂ, ಶ್ರೀವೈಷ್ಣವನ ಸ್ವರೂಪಕ್ಕನುಗುಣವಾಗಿಯೂ, ಅಶನ-(ಆಹಾರ), ಆಚ್ಛಾದನ-(ವಸ್ತ್ರ)ಗಳನ್ನು ಸಂಪಾದಿಸಿ, 'ಯಾವುದು ಪುರುಷನಿಗೆ ಅನ್ನವೋ ಅದೇ ಅವನ ದೇವತೆಗೂ ಅನ್ನವಾಗಿದೆ' ಎಂಬಂತೆ

ಮೂಲ: ಸಕಲ ಪದಾರ್ಥಂಗಳೈಯುಂ ಭಗವದ್ವಿಷಯತ್ತಿಲೇ ನಿವೇದಿತ್ತು.

ಎಲ್ಲವನ್ನೂ ಭಗವಂತನಿಗೆ ನಿವೇದನೆ ಮಾಡಿ

ಮೂಲ: ಯಥಾಬಲಂ ಭಾಗವತಕಿಂಚಿತ್ಕಾರತ್ತೋಡೇ ಅವನುಕ್ಕು ಅಭಿಮತ ಮಾಹ ವರ್ತಿಕ್ಕೈಯುಂ.

ಯಥಾಶಕ್ತಿ ಭಾಗವತ ಕೈಂಕರ್ಯವನ್ನು ಮಾಡಿ ಆ ಭಾಗವತನಿಗೆ ಪ್ರಿಯವಾಗುವಂತೆ ಇರುವಿಕೆಯೂ

ಮೂಲ: ಈಶ್ವರನ್ ಸನ್ನಿಧಿಯಿಲ್ ತನ್ನುಡೈಯ ನೀಚತ್ವತ್ತೈ ಅನುಸಂಧಿಕ್ಕೈಯುಂ.

ಭಗವಂತನ ಸನ್ನಿಧಾನದಲ್ಲಿ ತನ್ನ ನೈಚ್ಯವನ್ನು ಅನುಸಂಧಾನ ಮಾಡುವಿಕೆಯೂ

ಮೂಲ: ಆಚಾರ್ಯನ್ ಸನ್ನಿಧಿಯಿಲ್ ತನ್ನುಡೈಯ ಅಜ್ಞತೈಯೈ ಅನುಸಂಧಿಕ್ಕೈಯುಂ.

ಆಚಾರ್ಯರ ಸನ್ನಿಧಾನದಲ್ಲಿ ತನ್ನ ಅಜ್ಞಾನವನ್ನು ಅನುಸಂಧಾನ ಮಾಡುವಿಕೆಯೂ

ಮೂಲ: ಶ್ರೀವೈಷ್ಣವರ್ ಸನ್ನಿಧಿಯಿಲ್ ತನ್ನುಡೈಯ ಪಾರತಂತ್ರ್ಯತ್ತೈ ಅನುಸಂಧಿಕ್ಕೈಯುಂ.

ಶ್ರೀವೈಷ್ಣವರ ಸನ್ನಿಧಾನದಲ್ಲಿ ತನ್ನ ಪಾರತಂತ್ರ್ಯವನ್ನು ಅನುಸಂಧಾನ ಮಾಡುವಿಕೆಯೂ

ಮೂಲ: ಸಂಸಾರಿಹಳ್ ಮುನ್ನಿಲ್ ತನ್ನುಡೈಯ ವ್ಯಾವೃತ್ತಿಯೈ ಅನು ಸಂಧಿಕ್ಕೈಯುಂ.

ಸಂಸಾರಿಗಳ ಮುಂದೆ ತಾನು ಅವರಿಗಿಂತ ಹೇಗೆ ಬೇರ್ಪಟ್ಟವನಾಗಿದ್ದೇನೆ ಎಂಬ ವ್ಯತ್ಯಾಸವನ್ನು ಅನುಸಂಧಾನ ಮಾಡುವಿಕೆಯೂ

ಮೂಲ: ಪ್ರಾಪ್ಯತ್ತಿಲ್ ತ್ವರೆಯುಂ, ಪ್ರಾಪಕತ್ತಿಲ್ ಅಧ್ಯವಸಾಯಮುಂ.

ಪ್ರಾಪ್ಯವಾದ ಭದವದನುಭವಕೈಂಕರ್ಯದಲ್ಲಿ ತ್ವರೆಯೂ, ಅದನ್ನು ನಮಗೆ ದೊರಕಿಸಿಕೊಡುವ ಭಗವಚ್ಛರಣಾವಿಂದಶರಣಾಗತಿಯಲ್ಲಿ ದೃಢವಾಗಿರುವಿಕೆಯೂ

ಮೂಲ: ವಿರೋಧಿಯಿಲ್ ಭಯಮುಂ, ದೇಹತ್ತಿಲ್ ಅರುಚಿಯುಂ ಆರ್ತಿಯುಂ.

ವಿರೋಧಿಗಳಲ್ಲಿ ಭಯವೂ, ಈ ಶರೀರದಲ್ಲಿ ರುಚಿಯಿಲ್ಲದಿರುವಿಕೆಯೂ ಆರ್ತಿಯೂ

ಮೂಲ: ಸ್ವರೂಪತ್ತಿಲ್ ಉಣರ್ತಿಯುಂ, ಸ್ವರಕ್ಷಣತ್ತಿಲ್ ಅಶಕ್ತಿಯುಂ.

ಆತ್ಮಸ್ವರೂಪದಲ್ಲಿ ಎಚ್ಚರವೂ, ತನ್ನ ರಕ್ಷಣದಲ್ಲಿ ಅಶಕ್ತಿಯೂ

ಮೂಲ: ಉದ್ದೇಶ್ಯವಿಷಯತ್ತಿಲ್ ಗೌರವಮುಂ, ಉಪಕಾರ ವಿಷಯತ್ತಿಲ್ ಕೃತಜ್ಞತೈಯುಂ, ಉತ್ತಾರಕ ಪ್ರತಿಪತ್ತಿಯುಂ ಅನುವರ್ತಿಕ್ಕೈಯುಂ ವೇಣುಂ.

ಉದ್ದೇಶ್ಯವಾದ ಭಗವತ್ಕೈಂಕರ್ಯದಲ್ಲಿ ಗೌರವವೂ, ಉಪದೇಶ ಮಾಡುವ ಆಚಾರ್ಯರ ವಿಷಯದಲ್ಲಿ ಕೃತಜ್ಞತೆಯೂ, ಅವರೇ ಉತ್ತಾರಕರು (ನಮ್ಮನ್ನು ಮೇಲೆತ್ತುವವರು) ಎಂಬ ಪ್ರತಿಪತ್ತಿಯೂ, ಅವರನ್ನೇ ಅನುಸರಿಸುವಿಕೆಯೂ ಅವಶ್ಯಕವಾಗಿದೆ.

ಮೂಲ: ಇಪ್ಪಡಿ ಜ್ಞಾನಾನುಷ್ಠಾನಂಗಳೊಡೇ ಕೂಡಿ ವರ್ತಿಕ್ಕುಂ ಅವನ್ ಈಶ್ವರನುಕ್ಕು ಪಿರಾಟ್ಟಿಮಾರಿಲುಂ ನಿತ್ಯಮುಕ್ತರ್ರಿಲುಂ, ಅತ್ಯಂತಾಭಿಮತ ವಿಷಯ ಮಾಹಕ್ಕಡವನ್.

ಹೀಗೆ ಜ್ಞಾನಾನುಷ್ಠಾನಗಳಿಂದ ಇರುವಂತಹವನು, ಶ್ರೀ, ಭೂ, ನೀಳಾದೇವಿಯರಿಗಿಂತಲೂ, ನಿತ್ಯಸೂರಿ ಮುಕ್ತಾತ್ಮರುಗಳಿಗಿಂತಲೂ ಪರಮಾತ್ಮನಿಗೆ ಅತ್ಯಂತ ಪ್ರಿಯರಾಗುತ್ತಾರೆ.

॥ ಅರ್ಥಪಂಚಕಮ್ ಸಂಪೂರ್ಣಂ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

# ತತ್ತ್ವತ್ರಯ ವಿವರಣ ರಹಸ್ಯಂಗಳ್

# ಪ್ರಮೇಯ ಶೇಖರಮ್

ಮೂಲ: ನಿರ್ಹೇತುಕ ಭಗವತ್ಕಟಾಕ್ಷಮಡಿಯಾಹ ಅಜ್ಞಾತಸುಕೃತಮುಂಡಾಂ.

ಅಖಿಲಹೇಯ ಪ್ರತ್ಯನೀಕ ಸಮಸ್ತಕಲ್ಯಾಣೈಕತಾನನಾದ ಆ ಭಗವಂತನ ಯಾವ ಕಾರಣವೂ ಇಲ್ಲದ, ಎಂದರೆ ನಮ್ಮ ಪ್ರಯತ್ನದಿಂದ ಪಡೆಯದ ಕಟಾಕ್ಷದಿಂದ ಅಜ್ಞಾತಸುಕೃತವು ಏರ್ಪಡುತ್ತದೆ.

ಸುಕೃತವೆಂದರೆ ಪುಣ್ಯಫಲವನ್ನು ಕೊಡುವ ನಮ್ಮ ಕಾರ್ಯಗಳು. ನಾವು ಮಾಡುವ ಎಷ್ಟೋ ಕಾರ್ಯಗಳ ಮಧ್ಯೆ ಕೆಲವನ್ನು ತಾನಾಗಿ 'ಸುಕೃತ' ಎಂದು ಹೆಸರಿಟ್ಟು ನಮಗೇ ಅರಿಯದಂತೆ ಅವುಗಳಿಗೆ ಸತ್ಫಲವನ್ನು ಕೊಡುವ ಕರುಣಾಳು ಆ ಪರಮಾತ್ಮ. ಹೀಗೆ ನಮಗೇತಿಳಿಯದೆ 'ಸುಕೃತ' ಎಂದು ನಮ್ಮ ಕಾರ್ಯಗಳನ್ನು ಪರಮಾತ್ಮ ಪರಿಗಣಿಸುವುದರಿಂದ ಅವುಗಳು 'ಅಜ್ಞಾತ ಸುಕೃತ' ಎನಿಸಲ್ಪಟ್ಟಿವೆ. ಇವು ಮೂರು ವಿಧ.

ಯಾದೃಚ್ಛಿಕ, ಪ್ರಾಸಂಗಿಂಕ ಮತ್ತು ಆನುಷ್ಷಂಗಿಕ ಎಂಬುದಾಗಿದೆ.

ಯಾದೃಚ್ಛಿಕ ಸುಕೃತವೆಂದರೆ - ಪರಹಿಂಸೆಯನ್ನೇ ಮಾಡುವ ಇವನು ಒಮ್ಮೆ ತನಗೇ ತಿಳಿಯದೆ ಭಾಗವತ ವಿರೋಧಿಗಳನ್ನು ಯಾದೃಚ್ಛಿಕವಾಗಿ ಹಿಂಸಿಸಿದಾಗ ಪರಮಾತ್ಮ ಇವನು ಭಾಗವತರಿಗೆ ಒಳಿತನ್ನು ಮಾಡಿದ. ಇದೊಂದು ಸುಕೃತ ಎಂದು ಭಾವಿಸಿ ಫಲನೀಡುತ್ತಾನೆ.

ಪ್ರಾಸಂಗಿಕ ಸುಕೃತವೆಂದರೆ - ದೇವದಾಸಿಗಳನ್ನು ಕಾಣಲು ಇಚ್ಛೆಯುಳ್ಳವನಾಗಿ (ಭಗವಂತ ದರ್ಶನಕ್ಕಾಗಿ ಅಲ್ಲದೆ) ಅವರು

ನರ್ತಿಸುವ ದೇವಾಲಯಗಳಿಗೆ ಹೋದಾಗ ಅವನು ತನ್ನ ದೇವಾಲಯಕ್ಕೆ ಬಂದದ್ದನ್ನು ಸುಕೃತವಾಗಿ ಭಗವಾನ್ ಭಾವಿಸುತ್ತಾನೆ.

ಆನುಷ್ವಂಗಿಕ ಸುಕೃತ - ಹಸುವನ್ನು ಹೊಡೆಯಲು ಬರುತ್ತಿರುವಾಗ, ಆ ಹಸು ದೇವಾಲಯವನ್ನು ಸುತ್ತಿ ಓಡುವಾಗ, ಆ ಹಸುವನ್ನು ಹೊಡೆಯುವ ಉದ್ದೇಶದಿಂದ ಇವನೂ ದೇವಾಲಯವನ್ನು ಪ್ರದಕ್ಷಿಣೆ ಮಾಡುತ್ತಾನೆ. ಪರಮಾತ್ಮ ತನ್ನನ್ನು ಪ್ರದಕ್ಷಿಣೆ ಮಾಡಿದ್ದಾಗಿ ಹಸುವನ್ನು ಹೊಡೆಯುವ ಪಾಪವನ್ನು ಪ್ರದಕ್ಷಿಣೆ ಎಂಬ ಪುಣ್ಯವಾಗಿ ಪರಮಾತ್ಮನು ಭಾವಿಸುತ್ತಾನೆ.

ಇವುಗಳೇ 'ಸುಕೃತ'ವೆಂದು ಹೆಸರಿಸಲಾಗುವ ದುಷ್ಕೃತ್ಯಗಳು, ಹೀಗೆ ಪರಮಾತ್ಮನು ನಮ್ಮ ಆಕಾರ್ಯಗಳನ್ನು ಸುಕೃತವಾಗಿ ಭಾವಿಸುವುದಕ್ಕೆ ಕಾರಣ ಅವನ ನಿರ್ಹೇತುಕ ಕೃಪೆ.

ಮೂಲ: ಅದಡಿಯಾಹ ಅದ್ವೇಷ ಮುಂಡಾವ್. ಅದಡಿಯಾಹ ಭಗವದ್ಭಾಗವತ ವಿಷಯಂಗಳಿಲ್ ಆಭಿಮುಖ್ಯಂ ಉಂಡಾಮ್. ಆಭಿಮುಖ್ಯಂ ಉಂಡಾನವಾರೇ ತ್ಯಾಜ್ಯೋಪಾದೇಯ ವಿಭಾಗ ಜ್ಞಾನತ್ತಿಲ್ ಕೌತುಕಮುಂಡಾಮ್.

ಈ ಅಜ್ಞಾತ ಸುಕೃತದ ಫಲವಾಗಿ ಭಗವದ್ವಿಷಯದಲ್ಲಿ 'ದ್ವೇಷವಿಲ್ಲದಿರುವಿಕೆ' ಏರ್ಪಡುತ್ತದೆ. ಈ ಅದ್ವೇಷದಿಂದ ಭಗವದ್ಭಾಗವತ ವಿಷಯದಲ್ಲಿ ಆಭಿಮುಖ್ಯ ಪ್ರೀತಿ ಏರ್ಪಡುತ್ತದೆ. ಈ ಆಭಿಮುಖ್ಯ ಏರ್ಪಟ್ಟಾಗ ತ್ಯಾಜ್ಯ-(ಅಂಗೀಕರಿಸಬಾರದ್ದು) ಉಪಾದೇಯ - (ಅಂಗೀಕರಿಸಲೇಬೇಕಾದುದು) - (ತಳ್ಳಬೇಕಾದದ್ದು, ಕೊಳ್ಳಬೇಕಾದದ್ದು) ಯಾವುದು ಎಂಬ ವಿಭಾಗಜ್ಞಾನದಲ್ಲಿ ಕುತೂಹಲ ಉಂಟಾಗುತ್ತದೆ.

Funding: Tattva Heritage Foundation,Kolkata. Digitization: eGangotri.

ಮೂಲ: ಅತ್ತಾಲ್ ಸಾತ್ವಿಕ ಸಂಭಾಷಣಮುಂಡಾಮ್; ಅತ್ತಾಲ್ ಸದಾಚಾರ್ಯ ಸಮಾಶ್ರಯಣಂ ಉಂಡಾವ್; ಅದು ಉಂಡಾನವಾರೇ ತ್ಯಾಜ್ಯೋಪಾದೇಯ ನಿಶ್ಚಯಂ ಉಂಡಾವ್; ಅದು ಉಂಡಾನವಾರೇ ಪ್ರಾಪ್ಯಾನ್ತರತ್ತಿಲ್ ವೈರಾಗ್ಯಮುಂ ಪರಮ ಪ್ರಾಪ್ಯತ್ತಿಲ್ ಅಭಿನಿವೇಶಮುಂ ಉಂಡಾಂ.,

ಈ ಕುತೂಹಲವನ್ನು ತಣಿಸಿಕೊಳ್ಳಲು ಆ ಚೇತನ, ಬಲ್ಲವರಾದ ಸಾತ್ವಿಕರೊಡನೆ ಸಂಭಾಷಣೆ ಮಾಡುತ್ತಾನೆ. ಆಗ ಅವರು ಜ್ಞಾನವನ್ನು ಪಡೆಯಲು ಕಾತರಿಸುವ ಇವನನ್ನು ಒಬ್ಬ ಸದಾಚಾರ್ಯರ ಬಳಿ ಸೇರಿಸಿದಾಗ ಸದಾಚಾರ್ಯ ಸಮಾಶ್ರಯಣವು ಏರ್ಪಡುತ್ತದೆ. ಆ ಸಮಾಶ್ರಯಣದಿಂದ ತ್ಯಾಜ್ಯ ಯಾವುದು? ಉಪಾದೇಯ ಯಾವುದು? ಎಂಬುದರಲ್ಲಿ ನಿಶ್ಚಯ ಜ್ಞಾನ ಉಂಟಾಗುತ್ತದೆ. ಎಂದರೆ ಸಂಸಾರ ತ್ಯಾಜ್ಯ, ಭಗವತ್ಕೈಂಕರ್ಯ ಉಪಾದೇಯ ಎಂಬ ನಿಶ್ಚಯ ಏರ್ಪಟ್ಟಾಗ ಸಂಸಾರಕ್ಕೆ ಸಂಬಂಧಪಟ್ಟ ಇತರ ಪ್ರಾಪ್ಯಗಳಲ್ಲಿ ವೈರಾಗ್ಯವೂ, ಪರಮಪ್ರಾಪ್ಯವಾದ ಭಗವತ್ಕೈಂಕರ್ಯದಲ್ಲಿ ತ್ರೀವ್ರವಾದ ಪ್ರೇಮವೂ ಏರ್ಪಡುತ್ತದೆ.

ಮೂಲ: ಅದು ಉಂಡಾನವಾರೇ ಪ್ರಾಪ್ಯಾನ್ತರ ನಿವೃತ್ತಿಕ್ಕುಂ ಪರಮ ಪ್ರಾಪ್ಯ ಸಿದ್ಧಿಕ್ಕುಂ ಅಡಿಯಾನ ಸಿದ್ಧೋಪಾಯ ಸ್ವೀಕಾರಮುಂಡಾಮ್, ಅನಂತರಂ ಭಗವತ್ ಪ್ರಾಪ್ತಿಯಿಲೇ ತ್ವರೈ ಉಂಡಾಮ್.

ಈ ಅಭಿನಿವೇಶವು ಚೇತನನಿಗೆ ಏರ್ಪಟ್ಟರೆ ಇತರ ಪ್ರಾಪ್ಯಗಳನ್ನು ಕೈ ಬಿಡುವುದಕ್ಕೂ, ಪರಮಪ್ರಾಪ್ಯ ಸಿದ್ಧಿಗೂ ಮೂಲವಾದ ಸಿದ್ಧೋಪಾಯ ಸ್ವೀಕಾರವು-(ಪರಮಾತ್ಮನನ್ನೇ ಉಪಾಯವಾಗಿ ಸ್ವೀಕರಿಸುವಿಕೆ) ಉಂಟಾಗುತ್ತದೆ. ಈ ಸಿದ್ಧೋಪಾಯವಾದ ಭಗವಂತನನ್ನೇ ಆಶ್ರಯಿಸಿದ ಮೇಲೆ ಪರಮಪ್ರಾಪ್ಯವಾದ ಭಗವತ್ಕೈಂಕರ್ಯವು ಆ ತಕ್ಷಣ

ಏಕೆ ಲಭಿಸಲಿಲ್ಲ ಎಂಬ ಹಂಬಲಿಕೆ ಉಂಟಾಗಿ ಆ ಕೂಡಲೇ ಫಲವನ್ನು ಪಡೆಯಲು ತ್ವರೆ ಏರ್ಪಡುತ್ತದೆ.

ಮೂಲ: ಅನಂತರಂ 'ಅಹಂ ಸ್ಮರಾಮಿ' ಎನ್ನಿರಪಡಿಯೇ ಈಶ್ವರ ಸ್ಮೃತಿಕ್ಕು ವಿಷಯ ಭೂತನಾಮ್. ಅನಂತರಂ ಭೂತಸೂಕ್ಷ್ಮ ಶರೀರ ಪರಿಷ್ವಂಗ ಮುಂಡಾಮ್. ಅನಂತರಂ ಪರಮಾತ್ಮ ಸಂಸರ್ಗಮುಂಡಾಮ್. ಪಿನ್ಬು ಹಾರ್ದಾನುಗ್ರಹತ್ತಾಲೇ ಮಾರ್ಗವಿಶೇಷ ಪ್ರಕಾಶ ಮುಂಡಾಮ್. ಪಿನ್ಬು ಹೃದಯಗುಹಾ ನಿರ್ಗಮನಮುಂಡಾಮ್.

ಧಾತುಗಳು ಸುಸ್ಥಿತಿಯಲ್ಲಿದ್ದಾಗ ಯಾರು ನನ್ನನ್ನು ಭಜಿಸುತ್ತಾರೋ ಅವರು ಮರಣ ಕಾಲದಲ್ಲಿ ಕಲ್ಲು, ಮರದ ತುಂಡಿನಂತೆ ಬಿದ್ದಿದ್ದರೂ ನಾನವರನ್ನು ಸ್ಮರಿಸಿ ಸದ್ಗತಿಗೆ ಒಯ್ಯುತ್ತೇನೆ. 'ಅಹಂಸ್ಮರಾಮಿ' ಎಂದು ಭಗವಂತ ನುಡಿದಂತೆ, ಈ ತ್ವರೆ ಏರ್ಪಟ್ಟ ಒಡನೆ ಅವನ ನೆನಪಿಗೆ ಈ ಚೇತನ ವಿಷಯನಾಗುತ್ತಾನೆ. ಅನಂತರ ಈ ಸ್ಥೂಲ ಶರೀರ ವಿಯೋಗವಾಗಿ ಸೂಕ್ಷ್ಮ ಶರೀರವನ್ನು ವರಿಸುತ್ತಾನೆ. ಈ ಶರೀರ ಏರ್ಪಟ್ಟ ಒಡನೆ ಪರಮಾತ್ಮನೊಡನೆ ಸಂಸರ್ಗ ಏರ್ಪಟ್ಟ ಹೃದಯದಲ್ಲಿ ಅಂತರ್ಯಾಮಿ ಯಾಗಿರುವ ಪರಮಾತ್ಮ ಇವನ ಕೈಹಿಡಿದು, ತನ್ನ ಉತ್ತರೀಯವನ್ನು ಹೊದಿಸಿ ಅಚ್ಚುಮೆಚ್ಚಾಗಿ ಪರಮಪದ ಮಾರ್ಗದರ್ಶನ ಮಾಡಲು ಕರೆದೊಯ್ಯಲು ಸಂಕಲ್ಪಿಸುತ್ತಾನೆ.

ಇದಾದ ನಂತರ ಹೃದಯಗುಹೆಯಿಂದ ಈ ಆತ್ಮನಿಗೆ ನಿರ್ಗಮನವು ಏರ್ಪಡುತ್ತದೆ.

ಮೂಲ: ಅನಂತರಂ ಮೂರ್ಧನ್ಯನಾಡೀ ನಿಷ್ಕ್ರಮಣ ಮುಂಡಾಮ್, ಅನಂತರಂ ಅರ್ಚಿರಾದಿಮಾರ್ಗಗಮನಂ ಉಂಡಾಮ್. ಅನಂತರಂ ಆತಿವಾಹಿಕ ಸತ್ಕಾರಂ ಉಂಡಾಮ್.

ಪರಮಾತ್ಮನು ಕರೆದೊಯ್ಯಲು ಹೃದಯಗುಹೆಯಿಂದ ಹೊರಡುವ ಆತ್ಮ 'ಮೂರ್ಧನ್ಯನಾಡಿ' ಎಂಬಂತಹ ಶಿರಸ್ಸಿನಲ್ಲಿರುವ ನಾಡಿಯ ಮೂಲಕ ಶಿರಃ ಕಪಾಲವನ್ನು ಭೇಧಿಸಿ ಆ ಶರೀರದಿಂದ ಹೊರಬರುತ್ತಾನೆ. ಅಲ್ಲಿಂದ ಮುಂದೆ ಪ್ರಜ್ವಲಿಸುವ ಮಾರ್ಗವಾದ, ಎಂದೂ ಹಿಂತಿರುಗಿ ಬಾರದಂತಹ ವೈಭವೋಪೇತವಾದ ಅರ್ಚಿರಾದಿ ಮಾರ್ಗದಲ್ಲಿ ಗಮನವೇರ್ಪಡುತ್ತದೆ. ಅನಂತರ ಆತಿವಾಹಿಕರೆಂಬ ವಿಶೇಷರುಗಳಿಂದ ಅಭೂತಪೂರ್ವ ಸತ್ಕಾರವು ಏರ್ಪಡುತ್ತದೆ. ('ಅರ್ಚಿರಾದಿ ಮಾರ್ಗದ ವಿವರಣೆ ಇದೇ ಸೂತ್ರಕಾರರ 'ಅರ್ಚಿರಾದಿ' ಎಂಬ ರಹಸ್ಯ ಗ್ರಂಥದಲ್ಲಿ ವಿವರಿಸಲ್ಪಟ್ಟಿದೆ.)

ಮೂಲ: ಅನಂತರಂ ಆವರಣಾತಿಕ್ರಮಣಂ ಉಂಡಾಮ್, ಅನಂತರಂ ಪ್ರಕೃತ್ಯತಿಲಂಘನಂ ಉಂಡಾಮ್, ಅನಂತರಂ ವಿರಜಾಸ್ನಾನಂ ಉಂಡಾಮ್. ಅನಂತರಂ ಸೂಕ್ಷ್ಮ ಶರೀರ ವಿಶ್ಲೇಷಂ ಉಂಡಾಮ್.

ಈ ಸತ್ಕಾರದ ನಂತರ ಬ್ರಹ್ಮಾಂಡ ಕಟಾಹದ ಆವರಣವನ್ನು ದಾಟುತ್ತಾನೆ. ಆನಂತರ ಪ್ರಕೃತಿ ಮಂಡಲವನ್ನು ದಾಟುವುದು ಏರ್ಪಡುತ್ತದೆ. ಹೀಗೆ ಬಂದವನಿಗೆ ಪರಮ ಪದದಲ್ಲಿರುವ ಪರಮ ಮಂಗಳಕರವಾದ ವಿರಜಾ ನದಿಯಲ್ಲಿನ ಸ್ನಾನ ಲಭಿಸುತ್ತದೆ. ಆ ಪವಿತ್ರ ತೀರ್ಥ ಸ್ಪರ್ಶದಿಂದ ಯಾವ ಪ್ರಾಕೃತವಾದ ಸೂಕ್ಷ್ಮ ಶರೀರದಿಂದ ಇಲ್ಲಿಯವರೆಗೂ ಬಂದಿದ್ದನೋ ಆ ಸೂಕ್ಷ್ಮ ಶರೀರದ ವಿಯೋಗವು ಉಂಟಾಗುತ್ತದೆ.

ಮೂಲ: ಅನಂತರಂ ಅಪಹತಪಾಪ್ಮತ್ವಾದಿ ಗುಣಗಣ ಪ್ರಾದುರ್ಭಾವಂ ಉಂಡಾಮ್. ಅನಂತರಂ ಅಮಾನವ ಕರಸ್ಪರ್ಶಂ ಉಂಡಾಮ್. ಅನಂತರಂ ಭಗವತ್ಸಂಕಲ್ಪ ಕಲ್ಪಿತಮಾನ ದಿವ್ಯದೇಹ ಪ್ರಾಪ್ತಿ ಉಂಡಾಮ್.

ಸೂಕ್ಷ್ಮ ಶರೀರ ವಿಯೋಗವಾದೊಡನೆ ಅಪಹತಪಾಪ್ಮತ್ವ, ಶೋಕತ್ವ, ವಿಜರತ್ವ, ವಿಮೃತ್ಯುತ್ವ ಅಪಿಪಾಸುತ್ವ, ಸತ್ಯಕಾಮತ್ವ, ಸತ್ಯಸಂಕಲ್ಪಗಳೆಂಬ ಗುಣಗಳು ತಲೆ ಎತ್ತುತ್ತವೆ. ಇದಾದ ನಂತರ ವಿರಜಾ ನದಿಯಲ್ಲಿರುವ 'ಅಮಾನವ'ನೆಂಬುವವನ ಕರಸ್ಪರ್ಶ ಏರ್ಪಟ್ಟು ಭಗವಂತನ ಸಂಕಲ್ಪದಂತೆ ಪರಮಪದವಾಸಕ್ಕೆ ಯೋಗ್ಯವಾದ ಶುದ್ಧ ಸತ್ತ್ವಮಯವಾದ ದಿವ್ಯ ದೇಹ ಪ್ರಾಪ್ತಿಯಾಗುತ್ತದೆ.

ಮೂಲ: ಅನಂತರಂ ಅಕಾಲಕಾಲ್ಯ ದಿವ್ಯದೇಶ ಪ್ರಾಪ್ತಿಯುಂಡಾಮ್. ಅನಂತರಂ ಐರಮ್ಮದಂಹ್ರದತಟಸ್ನಾನಮುಂಡಾಮ್. ಪಿನ್ಬು ದಿವ್ಯಾಲಂಕಾರಮುಂಡಾಮ್. ಪಿನ್ಬು ವಿಮಾನಾರೋಹಣ ಮುಂಡಾಮ್. ಪಿನ್ಬು ತಿಲ್ಯಕಾನ್ತಾರ ಪ್ರವೇಶಂ ಉಂಡಾಂ.

ಅನಂತರ ಕಾಲವೇ ಇಲ್ಲದ ದಿವ್ಯದೇಶ ಪ್ರಾಪ್ತಿಯುಂಟಾಗುತ್ತದೆ. ಅನಂತರ 'ಐರಮ್ಮದ ಹ್ರದ' ಎಂಬ ತಟಾಕದಲ್ಲಿ ಸ್ನಾನ ಏರ್ಪಡುತ್ತದೆ. ಅನಂತರ ಈ ಚೇತನನಿಗೆ ದಿವ್ಯಾಲಂಕಾರ ಮಾಡಲ್ಪಡುತ್ತದೆ. ಅನಂತರ ವಿಮಾನದಲ್ಲಿ ಆರೋಹಣವೇರ್ಪಟ್ಟನಂತರ 'ತಿಲ್ಯಕಾನ್ತಾರ'ಕ್ಕೆ ಪ್ರವೇಶ ಉಂಟಾಗುತ್ತದೆ.

ಮೂಲ: ಅನಂತರಂ ದಿವ್ಯಾಪ್ಸರಸ್ಸತ್ಕಾರಂ ಉಂಡಾಂ. ಅನಂತರಂ ತಿಲ್ಯಗಂಧ ಪ್ರವೇಶಮುಂಡಾಮ್, ಅನಂತರಂ ಬ್ರಹ್ಮಗಂಧಪ್ರವೇಶಮುಂಡಾಂ.

ಅನಂತರ ದಿವ್ಯ ಅಪ್ಸರೆಗಳಿಂದ ಸತ್ಕಾರವೇರ್ಪಡುತ್ತದೆ. ಅನಂತರ ತಿಲ್ಯಗಂಧ ಪ್ರವೇಶ ಉಂಟಾಗುತ್ತದೆ. ಅದಾದನಂತರ ಬ್ರಹ್ಮಗಂಧ ಪ್ರವೇಶ ಏರ್ಪಡುತ್ತದೆ.

ಮೂಲ: ಅನಂತರಂ ಅಪ್ರಾಕೃತಗೋಪುರ ಪ್ರಾಪ್ತಿಯುಂಡಾಮ್ ಅನಂತರಂ ದಿವ್ಯನಗರ ಪ್ರಾಪ್ತಿಯುಂಡಾಮ್.

ಬ್ರಹ್ಮಗಂಧ ಪ್ರಾಪ್ತಿಯಾದ ಮೇಲೆ ಅಪ್ರಾಕೃತವಾದ ಆ ದಿವ್ಯನಗರದ ಪ್ರವೇಶದ್ವಾರದಲ್ಲಿರುವ ಗೋಪುರವನ್ನು ಸೇರುತ್ತಾನೆ. ನಂತರ ಅದನ್ನು ದಾಟಿ ದಿವ್ಯವಾದ ನಗರದೊಳಗೆ ಪ್ರವೇಶ ಲಭ್ಯವಾಗುತ್ತದೆ.

ಮೂಲ: ಅನಂತರಂ ಸೂರಿಪರಿಷತ್ ಪ್ರತ್ಯುದ್ಗಮನಂ ಉಂಡಾಮ್. ಅನಂತರಂ ರಾಜಮಾರ್ಗ ಗಮನಂ ಉಂಡಾಮ್.

ಸಂಸಾರಮಂಡಲದಿಂದ ಮುಕ್ತಿ ಪಡೆದು ಬಂದವನೇ ಎಂಬ ಆಶ್ಚರ್ಯಮಿಶ್ರಿತ ಗೌರವಗಳೊಡನೆ ನಿತ್ಯಸೂರಿಗಣಗಳೆಲ್ಲರೂ ಎದ್ದು ನಿಂತು ಮರ್ಯಾದೆಯನ್ನು ತೋರುವರು. ಅನಂತರ ಎಂದೂ ಕಾಣದ ರಾಜಮಾರ್ಗದಲ್ಲಿ ನಡೆದು ಬರುವಿಕೆ ಉಂಟಾಗುತ್ತದೆ.

ಮೂಲ: ಅನಂತರಂ ಬ್ರಹ್ಮತೇಜಃ ಪ್ರವೇಶ ಮುಂಡಾಮ್. ಅನಂತರಂ ದಿವ್ಯಗೋಪುರ ಪ್ರಾಪ್ತಿಯುಂಡಾಮ್.

ಅನಂತರ ಬ್ರಹ್ಮತೇಜಸ್ಸನ್ನು ಪ್ರವೇಶಿಸುತ್ತಾನೆ. ಅಲ್ಲಿಂದ ಮುಂದೆ ಕ್ರಮಿಸಿ ದಿವ್ಯಗೋಪುರವನ್ನು ಹೊಂದುತ್ತಾನೆ.

ಮೂಲ: ಅನಂತರಂ ಬ್ರಹ್ಮವೇಶ್ಮ ಪ್ರವೇಶಮುಂಡಾಮ್ ಅನಂತರಂ ದಿವ್ಯಮಂಟಪ ಪ್ರಾಪ್ತಿಯುಂಡಾಮ್. ಅನಂತರಂ ದಿವ್ಯ ಪಾರಿಷತ್ ಪ್ರಾಪ್ತಿಯುಂಡಾಮ್.

ಅನಂತರ ಪರಬ್ರಹ್ಮನ ಮನೆಗೆ ಪ್ರವೇಶ ಮಾಡುವ ಪ್ರಾಪ್ತಿ ಏರ್ಪಟ್ಟು ಅಲ್ಲಿಂದ ದಿವ್ಯಮಂಟಪವನ್ನು ಸೇರುತ್ತಾನೆ. ಅಲ್ಲಿ ದಿವಪಾರಿಷದರೊಡನೆ ಒಂದಾಗಿ ಸೇರುವ ಭಾಗ್ಯ ಲಭಿಸುತ್ತದೆ.

ಮೂಲ: ಅನಂತರಂ, ಸಪತ್ನೀಕ ಸರ್ವೇಶ್ವರ ದರ್ಶನಂ ಉಂಡಾಮ್. ಅನಂತರಂ ಸ್ತುತಿ, ಪ್ರಣಾಮ, ಅಂಜಲಿ ಪ್ರಮುಖ ಸಂಭ್ರಮಾನುವರ್ತನಂ ಉಂಡಾಮ್ ಅನಂತರಂ ಪರಮಾತ್ಮ ಸಮೀಪ ಪ್ರಾಪ್ತಿ ಉಂಡಾಮ್.

ಆ ಮಂಟಪದಲ್ಲಿ ಶ್ರೀ, ಭೂ, ನೀಳಾ, ಸಮೇತನಾಗಿ ಬಿಜಯ ಮಾಡಿಸಿರುವ ಪರಮಾತ್ಮನ ದರ್ಶನ ಭಾಗ್ಯ ಏರ್ಪಡುತ್ತದೆ. ಆ ಕೂಡಲೇ ಮತ್ತೆಮತ್ತೆ ಸ್ತುತಿಸುತ್ತಾ, ಸಾಷ್ಟಾಂಗ ಪ್ರಣಾಮ ಮಾಡುತ್ತಾ ಏಳುತ್ತಾ ಮಾಡುತ್ತಾ ಏಳುತ್ತಾ ಅಂಜಲಿ ಮಾಡುವ ಭಾಗ್ಯ ಉಂಟಾಗುತ್ತದೆ. ಅನಂತರ ಪರಮಾತ್ಮ ತನ್ನ ಸಮೀಪಕ್ಕೆ ಆಹ್ವಾನಿಸುವಂತಹ ಭಾಗ್ಯ ಲಭಿಸುತ್ತದೆ.

**ಮೂಲ:** **ಅನಂತರಂ ಪಾದಪೀಠಪರ್ಯಂಕಾರೋಹಣ ಮುಂಡಾಮ್. ಅನಂತರಂ ಭಗವದುತ್ಸಂಗಸಂಗಮುಂಡಾಂ. ಅನಂತರಂ ಆಲೋಕನಾಲಾಪಾದ್ಯನುಭವ ಮುಂಡಾಮ್. ಅನಂತರಂ ಆಲಿಂಗನಾದ್ಯನುಭವಂ ಉಂಡಾಮ್.**

ಭಗವಂತನನ್ನು ಸಮೀಪಿಸಿ ಆತ ಚರಣ ಊರಿರುವ ಪಾದಪೀಠದ ಮೇಲೆ ಏರಿ ಭಗವಂತನ ಮಡಿಲಲ್ಲಿ ಕುಳ್ಳಿರುವುದು ಏರ್ಪಡುತ್ತದೆ. ಆಗ ಪರಮಾತ್ಮ ಪರಮ ಪ್ರೇಮದಿಂದ ಇವನನ್ನು ಕಟಾಕ್ಷಿಸಿ 'ನೀನಾರು' ಎಂದು ಜೇನಿನ ನುಡಿಗಳಲ್ಲಿ ಕೇಳಿದಾಗ 'ಅಹಂ ಬ್ರಹ್ಮಾಸ್ಮಿ' ಎಂದು ಹೇಳುವ ಸಲ್ಲಾಪ ಭಾಗ್ಯ ಉಂಟಾಗುತ್ತದೆ.

**ಮೂಲ:** **ಅನಂತರಂ ಸ್ವರೂಪ, ರೂಪ, ಗುಣ, ವಿಗ್ರಹಾದ್ಯನುಭವಂ ಉಂಡಾಮ್. ಅನಂತರಂ ಅನುಭವ ಜನಿತ ಪ್ರೀತಿ ಪ್ರಕರ್ಷ ಮುಂಡಾಮ್. ಅನಂತರಂ ನಾನಾ ವಿಧ ವಿಗ್ರಹ ಪರಿಗ್ರಹ ಮುಂಡಾಮ್.**

ಅನಂತರ ಪರಮಾತ್ಮನ ಸ್ವರೂಪ, ರೂಪ, ಗುಣ, ವಿಗ್ರಹಾದಿಗಳ ಅನುಭವವು ಏರ್ಪಡುತ್ತದೆ. ಅನಂತರ ಆ ಅನುಭವದಿಂದ ಪ್ರೀತಿ ಪ್ರಕರ್ಷಕ್ಕೆ ಕಾಲುವೆಯಾಗಿ ಪರಮಾತ್ಮನಿಗೆ ಸೇವೆ ಮಾಡುವ ಅತಿಯಾಸೆಯಿಂದ ಹಲವಾರು ಶರೀರಗಳನ್ನು ಪರಿಗ್ರಹಮಾಡುವಿಕೆ ಏರ್ಪಡುತ್ತದೆ.

**ಮೂಲ: ಅನಂತರಂ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತಮಾನ ಸರ್ವ ಪ್ರಕಾರ ಕೈಂಕರ್ಯಂ ಉಂಡಾಮ್.**

ಹೀಗೆ ನಾನಾವಿಧವಾದ ಶರೀರ (ಪಕ್ಷಿ, ಪ್ರಾಣಿ, ಸೇವಕರು) ಮುಕ್ತಾತ್ಮರುಗಳಾಗಿ ಆ ಪರಮಪದ ನಾಥನಿಗೆ ಎಲ್ಲಡೆಗಳಲ್ಲೂ, ಎಲ್ಲಕಾಲದಲ್ಲೂ, ಎಲ್ಲ ವಿಧವಾದ ಕೈಂಕರ್ಯ ಮಾಡುವ ಮಹಾಭಾಗ್ಯ ಏರ್ಪಡುತ್ತದೆ.

**॥ ಪ್ರಮೇಯ ಶೇಖರಮ್ ಸಂಪೂರ್ಣಂ ॥**

**॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥**

**॥ ಜೀಯರ್ ತಿರುವಡಿಹಳೇ ಶರಣಂ ॥**

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

## ಪರಮಾರ್ಥವಿವರಣ ರಹಸ್ಯಂಗಳ್

# ಸಂಸಾರ ಸಾಮ್ರಾಜ್ಯಮ್

ಮೂಲ: ತುನ್ಬಕ್ಕಡಲಾಯ್, ಇರುಳ್ ತರುಮಾಞಾಲಮಾನ ಸಂಸಾರತ್ತುಕ್ಕು ಉಳ್‌ವಾಯಿಲೇ ಪಂಚಭೂತಂಗಳಾಯ್ ಶಮೈನ್ದು

ದುಃಖಸಾಗರವಾಗಿ, ಅಜ್ಞಾನವನ್ನೇ ಬೆಳೆಸುವ ಸಂಸಾರದೊಳಗೆ ಪಂಚಭೂತಗಳಾಗಿ

ಮೂಲ: 'ನವದ್ವಾರಪುರೇ' ಎನ್ಗಿರಪಡಿಯೇ ಒನ್ಬದುವಾಶಲಾನ ಪಟ್ಟೈವೀಟ್ಟುಕ್ಕು ಉಳ್‌ವಾಯಿಲೇ 'ಕೊಡುವಿನೈತ್ತೂರು' ಎನ್ಬದೊರು ಊರಾಯ್;

'ಒಂಭತ್ತು ಬಾಗಿಲಿರುವ ಪಟ್ಟಣ' ಎಂಬಂತೆ ಒಂಭತ್ತು ಬಾಗಿಲಿರುವ ಪುರದಲ್ಲಿ 'ಕ್ರೂರ ಪಾಪಗಳ ಊರು' ಎಂಬಂತೆ ಒಂದು ಊರಾಗಿ

ಮೂಲ: ಪುಹವಳಿ ತೆರಿಯುಮಿತ್ತನ್ನೈಯೊಳಿಯ ಪುರಪ್ಪಡವಳಿ ತೆರಿಯಾದಿರುಪ್ಪದೊರು ಕಾಟ್ಟನುಳ್ಳೇ, ಅನಂತಕ್ಲೇಶಭಾಜನಮಾನ ಮರತ್ತೈಯಿಟ್ಟು, ಅವಿದ್ಯೈ ಎನ್ಗಿರ ತೇರೈಚ್ಚಮೈತ್ತು, ಅವಸ್ಥಾ ಸಪ್ತಕಂಗಳ್ ಎನ್ಗಿರ ಉರುಳೈಹಳೈ ಚ್ಚೇರ್ತ್ತು, ರಾಗದ್ವೇಷಾದಿಗಳಾಹಿರ ಕುದಿರೈಹಳೈ ಅಣೈತ್ತು;

ಒಳಗೆ ಹೋಗಲು ಮಾರ್ಗವನ್ನು ಮಾತ್ರ ತಿಳಿದು ಹೊರಗೆ ಬರುವ ರೀತಿ ತಿಳಿಯದಂತಹ ಕಾಡಿನಲ್ಲಿ, ಅಪಾರವಾದ ಕಷ್ಟಶೋಕಗಳಿಗೆ ಆಶ್ರಯವಾದ ಮರವನ್ನು ಇಟ್ಟು, ಅವಿದ್ಯೆ ಎಂಬ ರಥವನ್ನು ಮಾಡಿ,

ಏಳು ಅವಸ್ಥೆಗಳೆಂಬ ಗರ್ಭ, ಜನ್ಮ, ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ, ಮರಣ ಚಕ್ರಗಳನ್ನು ಕೂಡಿಸಿ, ರಾಗ (ಪ್ರೀತಿ), ದ್ವೇಷ (ಅಪ್ರೀತಿ) ಎಂಬ ಕುದುರೆಗಳನ್ನು ಹೂಡಿ,

ಮೂಲ: 'ಗುಣತ್ರಯಂ'ಗಳೆನ್ಗಿರ ತಿರುಕುರುಮ್ಬ್ಯೈಊಂಜಲಿನ್‌ಮೇಲ್' ಕರ್ಮಮೆನ್ಗಿರ ಸಿಂಹಾಸನತ್ತೈಯಿಟ್ಟು 'ರುಚಿ' ಎನ್ಗಿರ ಮೇಲ್‌ವಿರಿಯೈ ವಿರಿತ್ತು 'ಅವಶ್ಯಂ ಅನುಭೋಕ್ತವ್ಯಂ' ಎನ್ಗಿರಪಡಿಯೇ ಅನುಭವಿತ್ತನ್ರಿ ಮೀಳವೊಣ್ಣಾದಿರುಕ್ಕಿರ ಉರುಪ್ಪಿಣಿಹಳಾಹಿರ ಭಾರ್ಯಾವರ್ಗಂ ಪಕ್ಕತ್ತಿಲಿರುಕ್ಕ;

ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಕಾಲುಗಳುಳ್ಳ ಉಯ್ಯಾಲೆಯ ಮೇಲೆ ಕರ್ಮವೆಂಬ ಸಿಂಹಾಸನವನ್ನಿಟ್ಟು 'ರುಚಿ' ಎಂಬ ಮೇಲ್ಹಾಸನ್ನು ಹರಪಿ, 'ಅನುಭವಿಸಲೇಬೇಕು' ಎಂಬಂತೆ ಅನುಭವಿಸದೆ ಇರಲಾಗದಂತಹ ಪತ್ನೀಪರಿವಾರ ಪಕ್ಕದಲ್ಲಿರಲಾಗಿ

ಮೂಲ: ಅನ್ಧಕಾರಮಾಹಿರ ವಿಳಕ್ಕೈ ಏತ್ತಿ

ಕತ್ತಲೆ ಎಂಬ ದೀಪವನ್ನು ಬೆಳಗಿಸಿ

ಮೂಲ: ಅವಸ್ತುಕ್ಕಳಾಹಿರ ದಾಸವರ್ಗಂ-ಪರದ್ವೇಷಂ, ಪರಹಿಂಸೈ, ಪರಾನುವರ್ತನಂ-ತುಡಕ್ಕಮಾನ ಭೋಗಂಗಳೈ ಭುಜಿಪ್ಪಿಕ್ಕ ಭುಜಿತ್ತು,

ಅವಸ್ತು (ವಸ್ತುವೇ ಅಲ್ಲ ಎಂಬಂತಿರುವ) ಗಳಾದ ದಾಸರುಗಳು, ಮತ್ತೊಬ್ಬರನ್ನು ದ್ವೇಷಿಸುವಿಕೆ, ಹಿಂಸಿಸುವಿಕೆ, ಇತರರನ್ನು ನಾಯಿಯಂತೆ ಹಿಂಬಾಲಿಸುವಿಕೆ ಮೊದಲಾದ ಭೋಗಗಳನ್ನು ಉಣಿಸಲು ಅದನ್ನುಂಡು

ಮೂಲ: ಅಪ್ರಕಾಶಿತ ಸ್ವರೂಪಸ್ವಭಾವನಾನ ತನ್ನೈ-'ವಾಸನೈ' ಎನ್ಗಿರ ವೀರತ್ತೈಯಿಟ್ಟುಪ್ಪಾರ್ತ್ತು

ಪ್ರಕಾಶಿಸದೇ ಇರುವ ಸ್ವರೂಪ, ಸ್ವಭಾವನಾದ ತನ್ನನ್ನು (ತಾನಾರು, ತನ್ನ ಸ್ವರೂಪ, ಸ್ವಭಾವಗಳೇನುಎಂದೇ ಅರಿಯದೆ ಅಜ್ಞನಾಗಿ) 'ವಾಸನೆ' ಎಂಬ ವೀರ್ಯದಿಂದ ಭಾವಿಸಿ

ಮೂಲ: ತಾಪತ್ರಯಂಗಳೆನ್ಗಿರ ವಿಡಾಯ್‌ಕ್ಕುಡೈಯಿನ್ ಕೀಳೇ ಪಂಚವೃತ್ತಿ ಪ್ರಾಣಂಗಳಾಹಿರ ಪುರೋಹಿತರ್ - ಸಂಸಾರತ್ತುಕ್ಕು ಮೂರ್ಧಾಭಿಷಿಕ್ತನಾಕ್ಕಿ ಖ್ಯಾತಲಾಭಪೂಜೈಹಳ್ ಕೊಂಡಾಡ;

ಅಧ್ಯಾತ್ಮಿಕ, ಆದಿಭೌತಿಕ, ಅಧಿದೈವಿಕಗಳಾದ ಮೂರು ತಾಪಗಳೆಂಬ ಕೊಡೆಯ ಕೆಳಗೆ ಪಂಚವ್ಯಕ್ತಿಪ್ರಾಣಗಳೆಂಬ ಪುರೋಹಿತರು (ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನಗಳೆಂಬ ಐದು ಪ್ರಾಣಗಳು), ಸಂಸಾರ ಸಾಮ್ರಾಜ್ಯಕ್ಕೆ ಇವನನ್ನು ಮೂರ್ಧಾಭಿಷಕ್ತನನ್ನಾಗಿ ಮಾಡಿ ಖ್ಯಾತಿ ಲಾಭ ಪೂಜೆಗಳನ್ನು ಕೊಂಡಾಡುತ್ತಿರಲು,

ಮೂಲ: ಪುಣ್ಯಪಾಪಂಗಳಾಹಿರ ಚಾಮರಮಿರಟ್ಟ, ಅನೇಕವಿಧ ದುಃಖಪರಂಪರೈಹಳ್ ಅಡಿಕ್ಕೊಲಿಯಲ್ ಪಣಿಮಾರ.

ಪುಣ್ಯ, ಪಾಪಗಳೆಂಬ ಚಾಮರಗಳು ಎರಡೂ ಕಡೆ ತೂಗಲು, ಅನೇಕ ದುಃಖಪರಂಪರೆಗಳು ದಂಡೆದಂಡೆಯಾದ ಮಾಲೆಯಾಗಿ ಇವನ ಕೊರಳಲ್ಲಿ ತೂಗಿ ಸೇವೆ ಮಾಡಲು

ಮೂಲ: ಅಹಂಕಾರಮಮಕಾರಂಗಳಾಹಿರ ಆಲವಟ್ಟಂ ಪರಿಮಾರ.

ಅಹಂಕಾರಮಮಕಾರಗಳೆಂಬ ಬೀಸಣಿಗೆಗಳು ಬೀಸುತ್ತಿರಲು

ಮೂಲ: 'ಸದಾದುಃಖವರ್ಷಿಣಿ'-ಶುಳತ್ತಿಪರಿಮಾರ.

'ಅಪಾರವಾಗಿ ದುಃಖವನ್ನು ಸುರಿಸುವಂತಹುದು' ಎಂಬಂತಹುದು ಆರತಿ ಮಾಡಲು

ಮೂಲ: ಅಸ್ಮೃತಿ ಒಟ್ಟುವಟ್ಟಿಲೆಡುಕ್ಕ.

ಮರೆವು ಎಂಬುದು ಪೂರ್ಣಕುಂಭವನೆತ್ತಲು

ಮೂಲ: ಅಭಿನಿವೇಶಂ ಕಳಾಂಚಿ ಎಡುಕ್ಕ.

ಅಭಿನಿವೇಶ ಎಂಬುದು ತಾಂಬೂಲ (ಉಗಿಯುವ) ಪಾತ್ರೆ ಹಿಡಿಯಲು

ಮೂಲ: ವಿಷಯಾಂತರರುಚಿ -ಅಡ್ಡೈಪ್ಪೈ ಎಡುಕ್ಕ.

ಎಲ್ಲ ಇತರ ವಿಷಯಾನುಭವಗಳಲ್ಲಿನ ರುಚಿ, ತಾಂಬೂಲ ಸಂಚಿಯನ್ನು ಹಿಡಿಯಲು

ಮೂಲ: ಪೂರ್ವೋತ್ತರಾಘಂಗಳೆನ್ಗಿರ ಆನೈಕ್ಕುದಿರೈಯೋಡ.

ಹಿಂದೆ ಸಂಗ್ರಹಿಸಿದ ಪಾಪಗಳು, ಎಂಬ ಆನೆಯೂ ಮುಂದೆ ಬರುವಂತಹ ಪಾಪಗಳು ಎಂಬ ಕುದುರೆಗಳೂ ಓಡಲು

ಮೂಲ: ವಾತಪಿತ್ತಶ್ಲೇಷ್ಮಂಗಳಾಹಿರ ಮಂತ್ರಿಹಳ್ ಸೇವಿಕ್ಕ.

ವಾತ, ಪಿತ್ತ , ಕಫಗಳೆಂಬ ಮೂರು ದೋಷಗಳಾದ ಮಂತ್ರಿಗಳು ಸೇವಿಸಲು,

ಮೂಲ: ಕಾಮಕ್ರೋಧಲೋಭಮದಮಾತ್ಸರ್ಯಮ್ ತುಡಕ್ಕಮಾನ ಪ್ರಭುಕ್ಕಳ್ ಸೇವಿಕ್ಕ.

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಾದ ರಾಜರುಗಳು ಸೇವೆ ಮಾಡಲು

ಮೂಲ: ಭಗವತಪಚಾರ, ಭಾಗವತಾಪಚಾರ, ಅಸಹ್ಯಾಪಚಾರ-ನಾನಾವಿಧಾಪಚಾರಮಾಹಿರ ಕಾಲಾಳ್‌ಹಳ್ ಸೇವಿಕ್ಕ.

ಭಗವಂತನಲ್ಲಿ ಮಾಡುವ ಅಪಚಾರ, ಭಾಗವತರುಗಳ ವಿಷಯದಲ್ಲಿ ಮಾಡುವ ಅಪಚಾರ ಅಸಹ್ಯಾಪಚಾರಗಳೆಂಬ ಕಾಲಾಳು (ಪದಾತಿ ಸೈನ್ಯ) ಇವನನ್ನು ಸೇವಿಸುತ್ತಿರಲು

ಮೂಲ: ನಿದ್ರಾದೇವಿ, ಜ್ಯೇಷ್ಠೆ-ತುಡಕ್ಕಮಾನ ಪೆಣ್ಬಿಳ್ಳೈಹಳ್ ಸೇವಿಕ್ಕ.

ನಿದ್ರಾದೇವಿ, ದರಿದ್ರದೇವಿ, ಅಶುಚಿದೇವಿ, ಜಹಾಸಾದೇವಿ ಮೊದಲಾದವರು ಇವನಿಗೆ ಸೇವೆ ಮಾಡುತ್ತಿರಲು

ಮೂಲ: ಆಶೈಯಾಹಿರ ಪಾಶಕ್ಕಯಿತ್ತಾಲೇ ಪಿಣೈತ್ತು, ಇಂದ್ರಿಯಂಗಳಾಹಿರ ಮದಕಳಿರುಹಳ್ ವಲಿಕ್ಕ ಕಾಲಮಾಹಿರ ಸಾರಥಿ ನಡತ್ತ.

ಆಸೆ ಎಂಬ ಕಡಿವಾಣವನ್ನು ಕಟ್ಟಿ, ಇಂದ್ರಿಯಗಳೆಂಬ ಮದ್ದಾನೆಗಳು ಎಳೆಯಲು, ಕಾಲವೆಂಬ ಸಾರಥಿ ನಡೆಸಲು

ಮೂಲ: ದೇಹಾತ್ಮಾಭಿಮಾನಿವನ್ನಾನ್, ಸ್ವತಂತ್ರನ್‌ವನ್ನಾನ್, ಅನ್ಯಶೇಷ ಭೂತನ್ ವನ್ನಾನ್ ಎಂದು ಕಾಳಂಗಳ್, ಚಿನ್ನಂಗಳ್ ಕಲನ್ದು ಪಣಿಮಾರ;

ದೇಹವನ್ನೇ ಆತ್ಮವೆಂದು (ಭ್ರಮಿಸಿ) ಅಭಿಮಾನಿಸುವವರು ಬರುತ್ತಿದ್ದಾರೆ, (ಭಗವಂತನಿಗೆ ಶೇಷವಾದ ಆತ್ಮವನ್ನು) ಸ್ವತಂತ್ರರು ಬರುತ್ತಿದ್ದಾರೆ. ಇತರರಿಗೆ ದಾಸಭೂತನಾದವರು ಬರುತ್ತಿದ್ದಾರೆ ಎಂಬುದಾಗಿ ಕಹಳೆ, ತುತ್ತೂರಿಗಳು ಒಟ್ಟಾಗಿ ಕೂಡಿ ಮೊಳಗಲು

ಮೂಲ: 'ಮೆಲ್ಲಿಯಿಲಾಕ್ಕೈ ಕ್ಕಿರಿಮಿಕ್ಕುರಿವರಿಲ್ ಮಿಳಿರ್‌ತನ್ನಾಂಗೇ ಶೆಲ್ಲಿಯ ಶೆಲ್‌ಹೈತ್ತುಲಹ್ಹೈ ವಿನ್ನಾಗ್ಗಿಣುಂ' (ತಿರುವಿರುತ್ತಂ-48) ಎನ್ನಿಗ್ರಪಡಿಯೇ ತಾನುಂ ತನ್ ಪರಿಕರಭೂತರುಮಾಹ ಸುಖಾನುಭವಂ ಪಣ್ಣಿ,

ಮೆತ್ತಗಿರುವ ದೇಹವುಳ್ಳ ಹುಳು ಗಾಯದ ಹೊರಗೆ ಕುಳಿತಿರೆ ನೋವು ತಿಳಿಯುವುದೇ. ಹಾಗೆಯೇ ನಾನೂ ಏನೂ ಅರಿಯದವನು ಎಂಬಂತೆ ತಾನೂ ತನ್ನ ಪರಿಕರಗಳೂ ಸುಖಾನುಭವವನ್ನು ಮಾಡಿ

ಮೂಲ: 'ಯಾದಾನುಂ ಓರಾಕ್ಕೈಯಿಲ್ ಪುಕ್ಕಂಗಾಪ್ಪುಂಡು ಮಾಪ್ಪವಿಳುಂದುಂ ಮುದಾವಿಯಿಲ್ ತಡುವಾರುಮುಯಿರ್ ಮುನ್ನಮೇ' (ತಿರುವಿರುತ್ತಂ 95) ಎನ್ಗಿರಪಡಿಯೇ ಪುಕ್ಕಪುಕ್ಕ ಶರೀರಂಗಳ್ ತೋರುಂ ಅಹಂಕಾರ ಮಮಕಾರಂಗಳ್ಶೈ ಪ್ಪಣ್ಣಿ.

'ಉಸಿರೆಂಬುದು ಅತಿ ಬಳಕೆಯಾದ ಮೆತ್ತಗಿನ ದೇಹದೊಡನೆ ಕೂಡಿದ ಹಲವು ಜನ್ಮಗಳ ಶರೀರದೊಳಗೆ ಹೊಕ್ಕು ಕಟ್ಟುಬಿದ್ದು, ನಂತರ ಆ ಸಂಬಂಧ ಕಳೆದು ಅನಂತರ ಪರಮಾತ್ಮನನ್ನು ಹೊಂದುವ ದೆಸೆಯನ್ನು ಪಡೆಯಿತು' ಎಂಬಂತೆ

ತಾನು ಹೊಕ್ಕ ಶರೀರಗಳಲ್ಲೆಲ್ಲಾ ನಾನು ಮನುಷ್ಯ, ನಾನು ದೇವ, ನಾನು ಯಕ್ಷ - ಇದು ನನ್ನದು ಎಂಬಿತ್ಯಾದಿಯಾಗಿ ಅಹಂಕಾರ, ಮಮಕಾರಗಳನ್ನು ಉಳ್ಳವನಾಗಿ

ಮೂಲ: ಸತ್ತಾತ್ಧಾರಕನಾದ ಸರ್ವೇಶ್ವರನ್ನೈ ಮರನ್ದು, ಮೊಯ್‌ತ್ತವಲ್ ವಿನ್ನೈಯುಳ್ ನಿನ್ನುತ್ರಿವಿಧ ಕರಣಂಗಳಾಲುಂ ಪಾತಕಂ, ಅತಿಪಾತಕಂ, ಮಹಾಪಾತಕಂ ತುಡಕ್ಕಮಾನವತ್ತಾಲೇ, ಪೋದುಪೋಕ್ಕಿಕ್ಕೊಂಡು ಪೋಹಿರ ಕಾಲತ್ತಿಲೇ.

ಆತ್ಮವನ್ನೇ ಧರಿಸಿ ಆತ್ಮಕ್ಕೆ ಸತ್ತೆಯನ್ನುಂಟುಮಾಡುವ ಆ ಪರಮಾತ್ಮನನ್ನು ಮರೆತು, ಮೇಲೆ ಕವಿದ ಬಲಿಷ್ಠವಾದ ಪಾಪಗಳಲ್ಲಿ ನಿಂತು ಮೂರೂ (ಕಾಯೇನ, ವಾಚಾ, ಮನಸಾ) ಕರಣಗಳಿಂದಲೂ ಪಾತಕ, ಅತಿಪಾತಕ, ಮಹಾಪಾತಕಗಳಾದಿಗಳಿಂದ ಕಾಲವನ್ನು ಕಳೆಯುತ್ತಿರಲಾಗಿ

ಮೂಲ: ಈಶ್ವರನುಡೈಯ ನಿರ್ಹೇತುಕ ವಿಷಯೀಕಾರತ್ತಾಲೇ ಇವನುಕ್ಕು ಅದ್ವೇಷಂ ಪಿರಕ್ಕ.

ಪರಮಾತ್ಮನ ನಿರಾಕಾರಣವಾದ (ಚೇತನನ ಯಾವ ಪ್ರಯತ್ನವೂಇಲ್ಲದೆ) ಪರಮಕೃಪಾಪೂರ್ಣವಾದ ಅನುಗ್ರಹದಿಂದ ಇವನಿಗೆ ಭಗವದ್ವಿಷಯದಲ್ಲಿ 'ದ್ವೇಷವಿಲ್ಲದಿರುವಿಕೆ'ಯು ಏರ್ಪಟ್ಟಾಗ

ಮೂಲ: ಅತ್ತಾಲೇ ರಕ್ಷಣತ್ತುಕ್ಕು ವಳಿಕಂಡು, ಕಳೈ ಎಡುಕ್ಕಕೊಡುತ್ತ ಕೋಲೈಕ್ಕೊಂಡು ಕಣ್ಣೈಕ್ಕಲೈಕ್ಕಿಕ್ಕೊಳ್ಳುವಾರೈಪ್ಪೋಲೇ, ನಮ್ ಪಕ್ಕಲ್ ಶೇರಕ್ಕೊಡುತ್ತ ಉಡಂಬೈಕ್ಕೊಂಡು ಅಹಲುಹೈಕ್ಕು ಉರುಪ್ಪಾಕ್ಕಿನಾನ್.

ಆ ಅದ್ವೇಷವನ್ನೇ ಪರಮಾತ್ಮನು ಆತ್ಮನನ್ನು ರಕ್ಷಿಸುವ ಮಾರ್ಗವಾಗಿ ಭಾವಿಸಿ, ಕಳೆ ಕೀಳಲು (ಬೇಡವಾದದ್ದನ್ನು ಕಳೆಯಲು) ಕೊಟ್ಟ ಕೋಲಿನಿಂದ ಕಣ್ಣನ್ನು ತಿವಿದುಕೊಳ್ಳುವವರಂತೆ, ನನ್ನನ್ನು ಬಂದು ಸೇರಲು ಸಾಧನವಾಗಿ ನೀಡಲ್ಪಟ್ಟ ಶರೀರವನ್ನು ನನ್ನಿಂದ ದೂರವಾಗುವುದಕ್ಕೆ ಉಪಯೋಗಿಸಿದ್ದಾನಲ್ಲಾ!

ಮೂಲ: 'ಪಲ್‌ಪಿರುವಿಕ್ಕು ನೋತ್ತೇನ್' ಎನ್ರು, ಒರು ಜನ್ಮತ್ತಿಲೇ ಅನೇಕ ಜನ್ಮತ್ತುಕ್ಕು ವೇಂಡುಮ್ ಪಾಪಂಗಳೈ ಆರ್ಜಿತ್ತುಕೊಳ್ಳುಹಿರ ಇವನ್ನೈ ನಂ ಪಕ್ಕಲಿಲೇ ಶೇರ್ತುಕ್ಕೊಳುಂ ವಿರಹೇದೋ ಎನ್ರು ತಿರುವುಳ್ಳಂಪತ್ತಿ,

'ಹಲವು ಜನ್ಮಗಳಿಗಾಗಿ ವ್ರತ ಮಾಡಿಸಿ' (ಜನ್ಮ ಕಳೆದುಕೊಳ್ಳುವುದಕ್ಕೆ ಬದಲಾಗಿ ಜನ್ಮ ತಾಳಲು ವ್ರತಮಾಡಿ) ಎಂಬಂತೆ ಒಂದು ಜನ್ಮದಲ್ಲೇ ಹಲವು ಜನ್ಮಗಳಿಗೆ ಬೇಕಾದಷ್ಟು ಪಾಪವನ್ನು ಸಂಪಾದಿಸುವ ಇವನನ್ನು ನನ್ನೊಡನೆ ಸೇರಿಸಿಕೊಳ್ಳುವ ಮಾರ್ಗವೇನು ಎಂದು ಚಿಂತಿಸಿ,

ಮೂಲ: ಪಲವಟ್ಟತ್ತಿಲೇ ತೂದುಶೆಯ್ ಕಣ್ಗಳ್‌ಕೊಂಡೊನ್ರುಪೇಶಿ.

ಹಲವು ರೀತಿಯಲ್ಲಿ ಸುತ್ತಲೂ ದೂತನಾಗಿ ಸುತ್ತುವ ಕಣ್ಣುಗಳಿಂದ ಮಾತಾಡಿ

ಮೂಲ : ಆಳ್ವಾನುಂ ಕರುದುಮಿಡಂ ಪೊರದುಮುವನಾಹೈಯಾಲೇ ತನ್ ಪರಿಕರಭೂತರ್ಕೈ ಏವಿವಿಡ, ನಿನ್ರುವ್ವುಲಹಿರ್ಕ್ಕಡಿವಾನ್ ನೇಮಿಪ್ಪಿರಾನ್ ತಮರ್ ಪೋನ್ದು.

ಸುದರ್ಶನಾಳ್ವಾನನೂ ಪರಮಾತ್ಮನ ಸಂಕಲ್ಪವನ್ನು ಅರಿತು ವರ್ತಿಸುವನಾದ್ದರಿಂದ ಅವನಂತಿರುವ ತನ್ನ ಪರಿವಾರವನ್ನು ಪರಮಾತ್ಮನು ನಿಯಮಿಸಲು, 'ಈ ಲೋಕದ ಎಲ್ಲ ದುಃಖವನ್ನೂ ನಿವಾರಿಸುವ ಚಕ್ರತ್ತಾಳ್ವಾನ್' ಎಂಬಂತೆ

ಮೂಲ: 'ಅರಳೆನ್ನುಂ ಒಳ್ವಾಳುರುವಿ 'ಅಡ್ಯೆನ್ದವರುವಿನ್ನೆಯೋಡಲ್ಲಲ್ ನೋಯ್ ಪಾವಂ ಇಡ್ಯೆನ್ದವ್ವೆ ಮಿಣ್ಪೊಳಿಯವೇಂಡಿಲ್-ನುಡಂಗಿಡ್ಯೆಯ್ಯೆ- ಮುನ್ನಿಲಂಗೈ ವೈತ್ತಾನ್' (ಮುದಲ್ ತಿರುವಂದಾದಿ 59) -ಮುರಣಳಿಯ ಮುನ್ನೋರುನಾಳ್ ತನ್ವಿಲಂಗೈ ವೈತ್ತಾನ್ ಶರಣ್, ಎನ್ನಿರಪಡಿಯೇ.

ಕೃಪೆಯೆಂಬ ಖಡ್ಗವನ್ನು ಝುಳಪಿಸಿ 'ಬಳಕುವ ನಡುವುಳ್ಳ ಸೀತೆಯನ್ನು ಸೆರೆಯಲ್ಲಿಟ್ಟ ರಾವಣನನ್ನು ನಾಶಮಾಡಲು ಶ್ರೀರಾಮನು ತನ್ನ ಕೈಯಲ್ಲಿ ಬಿಲ್ಲನ್ನು ಹಿಡಿದ. ತಮ್ಮ ಮೇಲೆ ಈಗ ಬಂದಿರುವ ಕ್ರೂರವಾದ ನಮ್ಮ ಅಜ್ಞಾನ, ದುಃಖ, ಶರೀರದ ವ್ಯಾಧಿ ಮೊದಲಾದ ಪಾಪಗಳ ಹೊರತಾಗಿ ಆ ಶ್ರೀರಾಮನೇ ಉಪಾಯವೂ, ಉಪೇಯವೂ ಆಗುತ್ತಾನೆ.

ಎಂಬಂತೆ ವಿರೋಧಿವರ್ಗವೆಲ್ಲವನ್ನೂ ಪೂರ್ಣವಾಗಿ ನಾಶಮಾಡಿ ಜ್ಞಾನವನ್ನು ನೀಡಲು

ಮೂಲ: ಇವನುಂ ಚೈತನ್ಯಂ ಕುಡಿಪುಹನ್ದು "ತೆರಿನ್ದುಣರ್ವೊನ್ರಿನ್ಱಿಯಾಲ್ ತೀವಿನ್ಯೈಯೇನ್' ವಾಳಾ ವಿರುನ್ದೊಳಿನ್ದೇನ್ ಕೀಳ್ ನಾಳ್‌ಹಳೆಲ್ಲಾಂ- ಕರನ್ದುರುವಿಲ್ ಅಮ್ಮಾನೈ ಎಜ್ಞಾನ್ಱು ಪಿನ್ದೊಡರ್‌ನ್ದಾಳಿಯಂಗೈ ಅಮ್ಮಾನೈ ಏತ್ತಾದಯರ್ತು" (ಪೆರಿಯತಿರುವಂದಾದಿ 82) ಎನ್ಗಿರಪಡಿಯೇ ಇಳೈನ್ದ ನಾಳೈಕ್ಕು ಅನುತಪಿತ್ತು;

ತನ್ನ ಸ್ವಯಂ ರೂಪವನ್ನು ಮರೆತು ಶ್ರೀರಾಮನಾಗಿ ಬಂದವನು ಮಾರೀಚನೆಂಬ ಜಿಂಕೆಯನ್ನು ಹಿಂಬಾಲಿಸಿದ, ಸುಂದರವಾದ ಬೆರಳಿನುಂಗುರ ಧರಿಸಿದ ಆ ರಾಮನನ್ನು ಸ್ತುತಿಸದೇ ನಾನು ಕೆಟ್ಟೆ, ಒಳ್ಳೆಯ ಜ್ಞಾನವಿಲ್ಲದ್ದರಿಂದ ಹಿಂದೆ ಕಳೆದ ದಿನಗಳಲ್ಲಿ ಆಯಾಸ ಗೊಂಡವನಾಗಿ ಪರಮಾತ್ಮನ ನಾಮವನ್ನೇ ಹೇಳದೇ ಹೋದೆ.

ಎಂಬಂತೆ ಕಳೆದುಹೋದ ದಿನಗಳಿಗಾಗಿ ಪರಿತಪಿಸಿ,

ಮೂಲ: ಪ್ರಾಪ್ಯತ್ತೈ ಉಳ್ಳಪಡಿ ಅರಿವಿತ್ತ ಆಚಾರ್ಯನ್‌ಪಕ್ಕಲ್ ಕೃತಜ್ಞನಾಯ್,

ಭಗವನ್ಮುಖೋಲ್ಲಾಸಕರ ಕೈಂಕರ್ಯದ ಪ್ರಾಪ್ಯವನ್ನು ಯಥಾವತ್ತಾಗಿ ತಿಳಿಸಿಕೊಟ್ಟಂತಹ ಆಚಾರ್ಯರ ವಿಷಯದಲ್ಲಿ ಕೃತಜ್ಞತೆಯುಳ್ಳವನಾಗಿ

ಮೂಲ: ವಿರೋಧಿವರ್ಗತ್ತಿಲ್ ಉಪೇಕ್ಷೆ ಪಿರನ್ದು ಶ್ರಿಯಃಪತಿಯೈ ಕ್ಕಿಟ್ಟಿಯಲ್ಲದು ಧರಿಕ್ಕವೊಣ್ಣಾದಿರುಕ್ಕಿರ ಪ್ರೇಮಂ ವಿಳೈನ್ದು,

ಮೇಲೆ ಅನುಭವಿಸಿದ ಸಂಸಾರ ಸಾಮ್ರಾಜ್ಯದ ಭೋಗಗಳೆಂದು ಭಾವಿಸಿದ ವಿರೋಧಿ ವರ್ಗಗಳಲ್ಲಿ ಉಪೇಕ್ಷೆ ಏರ್ಪಟ್ಟು ಶ್ರೀ ಮಹಾಲಕ್ಷ್ಮಿಗೆ ಪತಿಯಾದ ಪರಮಾತ್ಮನನ್ನು ಸೇರದೆ ಒಂದು ಕ್ಷಣವೂ ಇರಲಾರದಂತಹ ಪ್ರೇಮವು ಏರ್ಪಟ್ಟು

ಮೂಲ: 'ಇವ್ವಳವುಂ ಕುಲೈಯುಂ ಕಾಟ್ಟಿಲ್ ಕೈಕ್ಕೊಂಡರುಳವೇಣುಂ' ಎನ್ರು ಪಿರಾಟ್ಟಿ ಪುರುಷಕಾರಂ ಶೆಯ್ಯ, ಅವ್ವಳುವುಂ ಪೊರುಕ್ಕಮಾಟ್ಟಾದ ಪಡಿಯಾನ ವಾತ್ಸಲ್ಯಾದಿ ಗುಣವಿಶಿಷ್ಟ ವಸ್ತುವಾಹೈಯಾಲೇ, ಕೀಳ್ಶೆಯ್ದ ಅಂಶತ್ತೈ ತಿರುವುಳ್ಳಂಪತ್ತಿ , ಮೇಲ್ಶೈಯ್ಯವೇಂಡುಂ ಅಂಶತ್ತೈ ಪ್ರಾಪ್ಯಪರ್ಯಂತಮಾಹ ತಲೈಕ್ಕಟ್ಟಿಕೊಡುತ್ತರುಳುಂ

'ಇಷ್ಟು ಕಾತರಿಸುವಾಗ ಸ್ವೀಕರಿಸಿ ಅನುಗ್ರಹಿಸ'ಬೇಕೆಂದು ತಾಯಾದ ಶ್ರೀಮಹಾಲಕ್ಷ್ಮಿ ಪುರುಷಕಾರ ಮಾಡಲಾಗಿ, ಅಷ್ಟನ್ನು ಕೂಡ ಸಹಿಸಲಾರದ ಕಾರುಣ್ಯ ವಾತ್ಸಲ್ಯ, ಮಾರ್ದವ, ಆರ್ಜವ ಆದಿ ಗುಣಗಳಿಂದ ಕೂಡಿದ ವಸ್ತು ಈ ಪರಮಾತ್ಮನಾದ್ದರಿಂದ ಹಿಂದೆ ನಡೆದದ್ದನ್ನೆಲ್ಲಾ ಎಂದರೆ ಈ ಚೇತನನ ಹಿಂದಿನ ಅವಸ್ಥೆಗಳನ್ನೂ ಅವನನ್ನು ತಾನು ಪಡೆಯಲು ಪ್ರಯತ್ನಿಸಿದ್ದೆಲ್ಲವನ್ನೂ ಮೇಲೆ ಅವನಿಗೆ ಮಾಡಬೇಕಾದ ಒಳಿತನ್ನೂ ಚಿಂತಿಸಿ ತನ್ನ ಚರಣಾರವಿಂದಗಳ ನಿತ್ಯಕೈಂಕರ್ಯವೆಂಬ ಪ್ರಾಪ್ಯವನ್ನು ನೀಡಿ ಪರಮಾನುಗ್ರಹ ಮಾಡುತ್ತಾನೆ.

॥ ಸಂಸಾರಸಾಮ್ರಾಜ್ಯಮ್ ಸಂಪೂರ್ಣಂ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

## ಪರಮಾರ್ಥವಿವರಣ ರಹಸ್ಯಂಗಳ್

# ನವರತ್ನ ಮಾಲೈ

ಮೂಲ: ಶರಣಾಗತನಾನವನ್, ತನ್ನೈಯುಂ, ತನಕ್ಕು ವಿರೋಧಿಯಾನ ದೇಹತ್ತೈಯುಂ, ದೇಹತ್ತೈ ಪತ್ತಿವರುಂ ಬನ್ಧುಕ್ಕಳೈಯುಂ, ಸಂಸಾರಿಹಳೈಯುಂ, ದೇವತಾಂತರಂಗಳೈಯುಂ- ಶ್ರೀವೈಷ್ಣವರ್ ಹಳೈಯುಂ, ಆಚಾರ್ಯನೈಯುಂ, ಪಿರಾಟ್ಟಿಯೈಯುಂ, ಈಶ್ವರನೈಯುಂ, ನಿನೈತ್ತಿರುಕ್ಕುಂಪಡಿ ಎಂಗನೇ ಎನ್ನಿಲ್.

ಆಕಿಂಚನ್ಯ ಅನನ್ಯಗತಿತ್ವಗಳೊಡನೆ ಪರಮಾತ್ಮನ ಚರಣಾವಿಂದಗಳಲ್ಲಿ ಶರಣಾಗತಿಯನ್ನು ಮಾಡಿದ ಚೇತನನ ಭಾವನೆಗಳು ಯಾವ ರೀತಿ ಇರಬೇಕು ಎಂಬುದನ್ನು ತಿಳಿಸುವ, ಶರಣಾಗತರಿಗೆ ಮಾರ್ಗದೀಪ ವಾಗಿರುವ ಅನುಪಮ ಗ್ರಂಥ 'ನವರತ್ನಮಾಲೈ'. ಇದರಲ್ಲಿ ಒಂಭತ್ತು ಅದ್ಭುತವಾದ ವಿಷಯಗಳು ತಿಳಿಸಲ್ಪಟ್ಟಿವೆ. ರತ್ನಗಳು ತಮ್ಮ ಪ್ರಕಾಶದಿಂದ ಕತ್ತಲನ್ನು ಕಳೆದು ಬೆಳಕನ್ನು ಉಂಟುಮಾಡುವ ರೀತಿಯಲ್ಲಿ ಶರಣಾಗತನಾದವನ ಮಾರ್ಗದಲ್ಲಿ ಬೆಳಕನ್ನು ಪ್ರಸರಿಸುವ ಒಂಭತ್ತು ರತ್ನಗಳಾಗಿ ಈ ಒಂಭತ್ತು ವಿಷಯಗಳು ಯೋಜಿಸಲ್ಪಟ್ಟಿರುವುದರಿಂದ 'ನವರತ್ನಮಾಲೈ' ಎಂಬ ಹೆಸರು ಈ ಗ್ರಂಥಕ್ಕೆ ಅನ್ವರ್ಥವಾಗಿದೆ.

ಇದರಲ್ಲಿ ಮೊದಲನೆಯದಾಗಿ ಸೂತ್ರಕಾರರು ತಾವು ಪ್ರತಿಪಾದಿಸುವ ಒಂಭತ್ತು ವಿಷಯಗಳನ್ನು ಅನುಗ್ರಹಿಸುತ್ತಾರೆ. ಶರಣಾಗತನಾದವನು

1) ತನ್ನನ್ನು (ಜೀವಾತ್ಮನನ್ನು) 2) ತನಗೆ ವಿರೋಧಿಯಾದ ದೇಹವನ್ನು 3) ಆ ದೇಹವನ್ನು ಅನುಸರಿಸಿ ಏರ್ಪಡುವ ಬಂಧುಗಳು 4) ಸಂಸಾರಿಗಳು 5) ಇತರ ದೇವತೆಗಳು 6) ಶ್ರೀ ವೈಷ್ಣವರುಗಳನ್ನೂ 7) ಆಚಾರ್ಯನನ್ನೂ 8) ಶ್ರೀಮಹಾಲಕ್ಷ್ಮಿಯನ್ನೂ 9) ಪರಮಾತ್ಮನನ್ನೂ ಯಾವ ರೀತಿ ಭಾವಿಸಬೇಕೆಂದರೆ'' ಎಂಬುದಾಗಿ ಪ್ರಾರಂಭಿಸುತ್ತಾರೆ.

ಮೂಲ: ಉಡಂಬಿಲ್ ವೇರುಪಟ್ಟು ನಿತ್ಯನಾಯ್, ಒರುಪಡಿಪಟ್ಟು ಅಣುವಾಯ್, ಜ್ಞಾನತ್ತೈಯುಂ, ಆನಂದತ್ತೈಯುಂ, ವಡಿವಾಹ ಉಡೈಯನಾಯ್, ಜ್ಞಾನತ್ತುಕ್ಕುಂ ಆನಂದತ್ತುಕ್ಕುಂ ಇರುಪ್ಪಿಡಮಾಯ್, ಎಂಬೆರುಮಾನ್ನೈ ಯೊಳಿಯ ವೇರೊನ್ರು ನಿನೈತ್ತಲ್, ಶೊಲ್ಲುದಲ್, ಶೆಯ್ಯಮಾಟ್ಟಾದೇ, ಎಂಬೆರುಮಾನಕ್ಕೇ ಉರಿಯನಾಯ್, ತನ್ ಕಾರ್ಯತ್ತುಕ್ಕು ತಾನ್ ಕಡವನನ್ರಿಕ್ಕೇ ಅವನ್ನೈಯೇ ಫಲಮಾಹವುಡ್ಯೆಯ ನಾಯಿರುಕ್ಕುಂ ಎನ್ರು ತನ್ನೈ ನಿನೈಪ್ಪಾನ್.

(ಉಡಂಬಿಲ್ ನಿತ್ಯನಾಯ್) ಈ ದೇಹಕ್ಕಿಂತ ಭಿನ್ನನಾಗಿ ಎಂದರೆ ಸತತ ಪರಿಣಾಮಿಯಾಗಿರುವ ಪ್ರಕೃತಿ ತತ್ವದಿಂದಾದ ಈ ಶರೀರ ನಶ್ವರ ಹಾಗಿಲ್ಲದೆ ಈ ಆತ್ಮ ನಿತ್ಯನಾದವನು. ಎಂದರೆ ತನ್ನ ಸ್ವರೂಪದಲ್ಲಿ ಎಂದಿಗೂ ವಿಕಾರವಿಲ್ಲದವನು.

(ಒರುಪ್ಪಡಿಪ್ಪಟ್ಟು ಅಣುವಾಯ್) ಎಲ್ಲಾ ಆತ್ಮಗಳ ಸ್ವರೂಪ, ರೂಪಗಳೆಲ್ಲ ಒಂದೇ ವಿಧವಾಗಿವೆ. ಆತ್ಮಗಳೆಲ್ಲವೂ ಅಣುವಾಗಿವೆ.

(ಜ್ಞಾನ.... ಉಡೈಯನಾಯ್) ಜ್ಞಾನ ಆನಂದವನ್ನೇ ತನಗೆ ಸ್ವರೂಪವಾಗಿ ಉಳ್ಳವನಾಗಿದ್ದಾನೆ. 'ಜ್ಞಾನಾನಂದಮಯಸ್ತ್ವಾತ್ಮಾ' ಎಂಬುದಾಗಿಯೇ ಆತ್ಮ ನಿರೂಪಿಸಲ್ಪಡುತ್ತಾನೆ.

(ಜ್ಞಾನ .....ಇರುಪ್ಪಿಡಮಾಯ್) ಜ್ಞಾನ, ಆನಂದಗಳಿಗೆ ಆಶ್ರಯನಾಗಿಯೂ ಇದ್ದಾನೆ.

(ಈ ಮೇಲಿನ ಸೂತ್ರಗಳಲ್ಲಿ ಹೇಳಲ್ಪಟ್ಟ ಎರಡು ವಿಷಯಗಳ ಅಭಿಪ್ರಾಯವೇನೆಂದರೆ - ಆತ್ಮನ ಸ್ವರೂಪವು ಜ್ಞಾನ, ಆನಂದ ಮತ್ತು ಸ್ವಭಾವವೂ ಜ್ಞಾನ, ಆನಂದ ಎಂಬುದಾಗಿದೆ)

(ಎಂಬೆರುಮಾನ್ಕೈ...... ಉರಿಯನಾಯ್) ಪರಮಾತ್ಮನ ಹೊರತಾಗಿ ಬೇರೊಂದನ್ನೂ ನೆನೆಯದೆ, ಹೇಳದೆ, ಮಾಡದೆ ಎಂದರೆ ತ್ರಿಕರಣಪೂರ್ವಕವಾಗಿ ಪರಮಾತ್ಮನಿಗೇ ಮೀಸಲಾಗಿ

(ತನ್.....ಇರುಕ್ಕುಂ) ತನ್ನ ಕಾರ್ಯಗಳಿಗೆ ತಾನು ಹೊಣೆ ಎಂದು ತಿಳಿಯದೆ, ಆ ಪರಮಾತ್ಮನನ್ನೇ ಫಲವಾಗಿ ಉಳ್ಳವನಾಗಿದ್ದಾನೆ.

ಈ ರೀತಿ ನಿತ್ಯ ಅಣು ಸ್ವರೂಪ, ಸ್ವಭಾವಗಳು, ಜ್ಞಾನಾನಂದ, ಪರಮಾತ್ಮನಿಗೇ ಮೀಸಲಾದವನು, ತನ್ನ ಫಲ ಭಗವಂತನೇ ಎಂದು ಚೇತನನು ತನ್ನನ್ನು ತಾನು ತಿಳಿಯಬೇಕು ಎಂಬುದು ಈ ಸೂತ್ರದಿಂದ ಹೇಳಲ್ಪಟ್ಟಿದೆ.

ಮೂಲ: ತನ್ನೈ ಉಳ್ಳಪಡಿ ಅರಿಯವೊಟ್ಟಾತ್ತೇ ವಿಪರೀತ ಜ್ಞಾನತ್ತೈ ಜನಿಪ್ಪಿತ್ತು ಇರುಪತ್ತುನಾಲು ತತ್ವಂಗಳಿನುಡೈಯ ತಿರಳಾಯ್, ಅನಿತ್ಯಮಾಯ್, ಎಪ್ಪೋದುಮೊಕ್ಕ ಪರಿಣಮಿಕ್ಕಕ್ಕಡವತಾಯ್. ಒರುನಾಳುಂ ಜ್ಞಾನತ್ತುಕ್ಕಿರಪ್ಪಿಡಮನ್ರಿಕ್ಕೇ, ಅನಂತದುಃಖಂಗಳೈ ವಿಳೈವಿಕ್ಕಕ್ಕಡವದಾಯ್. ಶಬ್ದಾದಿ ವಿಷಯಂಗಳಿಲೇ ಮೂಟ್ಟಿನಶಿಪ್ಪಿಕ್ಕುಮೆನ್ರು ತನ್ ದೇಹತ್ತೈ ನಿನ್ಯೆಪ್ಪಾನ್.

ಆತ್ಮ ತನ್ನನ್ನು ತಾನು ಅರಿಯಲಾಗದಂತೆ ವಿಪರೀತ ಜ್ಞಾನವನ್ನು ಉಂಟಮಾಡಿ (ಎಂದರೆ ದೇಹವನ್ನೇ ಆತ್ಮ ಎಂದು ತಿಳಿಯುವಂತಹ ಅಜ್ಞಾನವನ್ನು ಉಂಟುಮಾಡಿ) ಪ್ರಕೃತಿ, ವಿಕೃತಿ, ಮಹತ್, ಅಹಂಕಾರ (ರಾಜಸ, ತಾಮಸ, ಸಾತ್ವಿಕ) ಮನಸ್ಸು, ಪಂಚೇಂದ್ರಿಯಗಳು,

ಪಂಚತನ್ಮಾತ್ರೆಗಳು, ಪಂಚಭೂತಗಳು, ಹತ್ತು ಕರ್ಮೇಂದ್ರಿಯಗಳೆಂಬ 24 ತತ್ವಗಳ ಸಂಘಾತವಾಗಿ

ಅನಿತ್ಯವಾಗಿ ಸತತ ಪರಿಣಾಮಿಯಾಗಿ, ಒಂದಿದಿನವೂ ಜ್ಞಾನಕ್ಕೆ ಆಶ್ರಯವಲ್ಲದ್ದಾಗಿ, ಅನಂತವಾದ ದುಃಖಗಳನ್ನೇ ಉಂಟುಮಾಡುವಂತಹುದಾಗಿ, ಶಬ್ದ, ರೂಪ, ರಸ, ಗಂಧ, ಸ್ಪರ್ಶ ಎಂಬ ಐದು ವಿಷಯಗಳಲ್ಲೇ ಆತ್ಮ ಪ್ರವರ್ತಿಸುವಂತೆ ಮಾಡಿ ಆತ್ಮ ನಾಶವಾಗುವಂತೆ ಮಾಡುವುದು ಎಂಬುದಾಗಿ ಈ ದೇಹವನ್ನು ತಿಳಿಯಬೇಕು.

ಮೂಲ: ಆತ್ಮಜ್ಞಾನತ್ತೈಯುಂ ಭಗವದ್ ಜ್ಞಾನತ್ತೈಯುಂ, ಭಗವದ್ವಿಷಯತ್ತಿಲ್ ರುಚಿಯೈಯುಂ, ತ್ವರೈಯುಂ ಕುಲೈತ್ತು, ದೇಹಾತ್ಮಾಭಿಮಾನತ್ತೈಯುಂ, ಅಹಂಕಾರಮಮಕಾರಂಗಳೈಯುಂ, ಕಾಮಕ್ರೋಧಾದಿಹಳೈಯುಂ ವಿಳೈಪ್ಪಿತ್ತು ಪಾಪಮಡಿಯಾಹವನ್ದು ಅನರ್ಥತ್ತೈಪಣ್ಣುವಾರ್‌ಹಳೆನ್ರು ದೇಹತ್ತೈ ಪತ್ತಿವರುಂ ಬನ್ಧುಕ್ಕಳೈ ನಿನೈಪ್ಪಾನ್.

ಆತ್ಮಜ್ಞಾನವನ್ನು, ಭಗವದ್ ಜ್ಞಾನವನ್ನೂ ಪರಮಾತ್ಮನ ವಿಷಯದಲ್ಲಿರುವ ರುಚಿಯನ್ನೂ ಅವನನ್ನು ಪಡೆಯುವುದರಲ್ಲಿರುವ ಆತುರವನ್ನೂ ಹಾಳುಮಾಡಿ, ದೇಹವನ್ನೇ ಆತ್ಮವೆಂದು ಭ್ರಮಿಸುವ ಅಭಿಮಾನವನ್ನೂ, ಅಹಂಕಾರಮಮಕಾರಗಳನ್ನೂ, ಕಾಮಕ್ರೋಧಾದಿಗಳನ್ನೂ , ಅಭಿವೃದ್ಧಿಮಾಡಿ, ನಮ್ಮ ಪೂರ್ವಜನ್ಮದ ಪಾಪವೇ ಕಾರಣವಾಗಿ ಬಂದು ಅನರ್ಥವನ್ನು ಉಂಟುಮಾಡುವವರು ಎಂಬುದಾಗಿ ಈ ದೇಹವನ್ನು ಅನುಸರಿಸಿ ಬರುವ ಬಂಧುಗಳನ್ನು ಭಾವಿಸಬೇಕು.

ಮೂಲ: ಭಗವದನುಭವತ್ತುಕ್ಕುಂ ಭಗವತ್ಕೈಂಕರ್ಯತ್ತುಕ್ಕುಂ, ವಿರೋಧಿಹಳಾಯ್, ಸಂಸಾರವರ್ಧಕರಾಯ್, ಇರುಪ್ಪಾರ್‌ಹಳೆನ್ರು, ಸಂಸಾರಿಹಳೈ ನಿನೈಪ್ಪಾನ್.

ಭಗವದನುಭವಕ್ಕೂ, ಭಗವತ್ ಕೈಂಕರ್ಯಕ್ಕೂ ವಿರೋಧಿಗಳಾಗಿ ಸಂಸಾರವನ್ನು ಮೇಲೇ ಮೇಲೇ ಬೆಳೆಸುವವರು ಎಂಬುದಾಗಿ ಸಂಸಾರಿಗಳನ್ನು ತಿಳಿಯಬೇಕು.

ಮೂಲ: ಅಜ್ಞರಾಯ್, ಅಶಕ್ತರಾಯ್ ಎಂಬೆರುಮಾನ್ ಪಕ್ಕಲಿಲೇ ಪಿರನ್ದು ಅವನ್ ಕೊಡುತ್ತ ಪದಂಗಳ್ಳೆ ಉಡ್ಡೆಯರಾಯ್, ಅವನೋಡೇ ಎದಿರಿಟ್ಟುದುರ್ಮಾನಿಹಳಾಯ್, ತಂಗಳ್ಳೆ ಪೋರಪ್ಪೊಲಿಯನಿನೈತ್ತು ನಾಟ್ಟಾರ್ಕ್ಕೆ ಭ್ರಮಿಪ್ಪಿತ್ತು ಅನರ್ಥತ್ತೈ ಪಣ್ಣುವಾರ್ ಶಿಲರೆನ್ರು ದೇವತಾಂತರಂಗಳ್ಳೆ ನಿನೈಪ್ಪಾನ್.

ಯಥಾರ್ಥವಾದ ಆತ್ಮ ಪರಮಾತ್ಮ ಜ್ಞಾನವಿಲ್ಲದವರಾಗಿ, ಪರಿಪೂರ್ಣ ಶಕ್ತಿಯಿಲ್ಲದವರಾಗಿ, ಭಗವಂತನಿಂದಲೇ ಹುಟ್ಟಿ ಅವನಿಂದ ಕೊಡಲ್ಪಟ್ಟ ಪದವಿಗಳನ್ನು ಉಳ್ಳವರಾಗಿ, ಅವನನ್ನೇ ಎದುರಿಸಿ ನಿಂತು ದುರ್ಮಾನಿಗಳಾಗಿ (ಪಾರಿಜಾತವೃಕ್ಷಕ್ಕಾಗಿ ಪರಮಾತ್ಮನನ್ನೇ ಎದುರಿಸಿದ ಇಂದ್ರ) ತಮ್ಮನ್ನು ಅಪಾರವಾಗಿ ಭಾವಿಸಿಕೊಂಡು ಲೋಕದವರಿಗೂ ಭ್ರಮೆಯುಂಟುಮಾಡಿ ಅನರ್ಥವನ್ನು (ಭಸ್ಮಾಸುರನಿಗೆ ವರ ಕೊಟ್ಟ ಶಿವ, ಹಸುಕರುಗಳನ್ನೂ ಗೋಪಾಲಕರನ್ನೂ ಬಚ್ಚಿಟ್ಟ ಬ್ರಹ್ಮ ಇತ್ಯಾದಿಗಳು) ಉಂಟುಮಾಡುವ ಕೆಲವರು ಎಂಬುದಾಗಿ ದೇವತಾಂತರಗಳನ್ನು ಭಾವಿಸಬೇಕು.

ಮೂಲ: ಭಗವದ್ ಜ್ಞಾನತ್ತುಕ್ಕುಂ, ಇತರ ವಿಷಯವೈರಾಗ್ಯತ್ತುಕ್ಕುಂ, ಭಗವದ್ಭಕ್ತಿಕ್ಕುಂ ವರ್ಧಕರಾಯ್, ಶೇಷಿಹಳಾಯ್, ಉಶಾತ್ತುಣ್ಣೈ ಯಾಯ್, ಪ್ರಾಪ್ಯತ್ತುಕ್ಕು ಎಲ್ಲೈನಿಲೈಮಾಯಿರುಪ್ಪಾರ್‌ಹಳೆನ್ರು ಶ್ರೀವೈಷ್ಣವರ್‌ಹಳ್ಳೆ ನಿನೈಪ್ಪಾನ್.

ಭಗವದ್ ಜ್ಞಾನವನ್ನೂ, ಲೌಕಿಕವಾದ ಇತರ ವಿಷಯ ವೈರಾಗ್ಯವನ್ನೂ, ಭಗವಂತನಲ್ಲಿನ ಭಕ್ತಿಯನ್ನು ಬೆಳೆಸುವವರಾಗಿಯೂ, ನಮಗೆ

ಸ್ವಾಮಿಗಳಾಗಿಯೂ, ಭಗವಂತನ ಕಲ್ಯಾಣಗುಣಾನುಭವಕ್ಕೆ ಜೊತೆಯಾಗಿಯೂ ಪುರುಷಾರ್ಥದ ಎಲ್ಲೆಯಾಗಿಯೂ ಶ್ರೀವೈಷ್ಣವರುಗಳನ್ನು ತಿಳಿಯಬೇಕು.

ಮೂಲ: ತನ್ ಕಟಾಕ್ಷತ್ತಾಲೇ ಎನ್ನೈ ತಿರುತ್ತಿ ಸರ್ವೇಶ್ವರನ್ ಕೈಕ್ಕೊಳ್ಳುಹೈಕ್ಕು ಯೋಗ್ಯನಾಂಪಡಿ ಪಣ್ಣಿ, ಅವನ್ ತಿರುವಡಿಹಳಿಲೇ ಶೇರ್ತು. ಅರಿಯಾದನ ಅರಿವಿತ್ತು ಸ್ವಾಮಿಯಾಯ್ ಎನ್ರುಮೊಕ್ಕ ಅಡಿಮೈ ಕೊಳ್ಳುಂ ಮಹೋಪಕಾರಕನ್ ಎನ್ರು ಆಚಾರ್ಯನೈ ನಿನೈಪ್ಪಾನ್.

ತನ್ನ ಪರಮಅನುಗ್ರಹಪೂರ್ಣವಾದ ಕಟಾಕ್ಷದಿಂದ ನನ್ನನ್ನು ತಿದ್ದಿ ಸನ್ಮಾರ್ಗಕ್ಕೆ ತಂದು, ಪರಮಾತ್ಮನು ನನ್ನನ್ನು ಸ್ವೀಕರಿಸುವುದಕ್ಕೆ ಯೋಗ್ಯನಾಗುವಂತೆ ಮಾಡಿ, ಆ ಪರಮಾತ್ಮ ಚರಣಗಳಲ್ಲಿ ನನ್ನನ್ನು ಸೇರಿಸಿ, ಅರಿವಿಲ್ಲದ ನಮಗೆ ಅರಿವು ಮೂಡಿಸಿ, ನಮಗೆ ಸ್ವಾಮಿಯಾಗ್ಗಿ, ಯಾವಕಾಲಕ್ಕೂ ನಮ್ಮನ್ನು ದಾಸರಾಗಿ ಉಳ್ಳವರಾಗಿರುವ ಪರಮಉಪಕಾರಕರು ಎಂಬುದಾಗಿ ಆಚಾರ್ಯರನ್ನು ಭಾವಿಸಬೇಕು.

ಮೂಲ: ನಮ್ಮುಡೈಯ ಅಪರಾಧತ್ತೈಯುಂ, ಈಶ್ವರ ಸ್ವಾತಂತ್ರ್ಯತ್ತೈಯುಂ, ಕುಲೈತ್ತು, ಅವನುಡೈಯ ಕಾರುಣ್ಯ ವಾತ್ಸಲ್ಯಾದಿಗುಣಂಗಳೈ ಎಳುಪ್ಪಿ, ನಮಕ್ಕು ಪುರುಷಕಾರಭೂತೈಯಾಯ್. ಮಾತಾವಾಯ್, ಸ್ವಾಮಿನಿಯಾಯ್, ಪ್ರಾಪ್ಯೈಯಾಯಿರುಕ್ಕುಮೆನ್ರು ಪಿರಾಟ್ಟಿಯೈ ನಿನೈಪ್ಪಾನ್.

ನಮ್ಮ ಅಪರಾಧಗಳನ್ನೂ, ಯಾರನ್ನೂ ಯಾವ ಅಪರಾಧಕ್ಕಾಗಿಯೂ ಹೇಗೆ ಬೇಕಾದರೂ ದಂಡಿಸುತ್ತೇನೆ ಎಂಬ ಈಶ್ವರನ ಸ್ವಾತಂತ್ರ್ಯವನ್ನೂ ಇಲ್ಲವಾಗಿಸಿ, ಆ ಪರಮಾತ್ಮನ ಕಾರುಣ್ಯ, ವಾತ್ಸಲ್ಯ, ಮಾರ್ದವ, ಆರ್ಜವ ಸೌಹಾರ್ದಾದಿಗಳನ್ನು ತಟ್ಟಿ ಎಬ್ಬಿಸಿ, ನಮ್ಮನ್ನು ಆ ಭಗವಂತನೊಡನೆ ಕೂಡಿಸಲು ನಮ್ಮ ಪರ ವಾದಿಸುವ ಪುರುಷಕಾರ

ಭೂತೆಯಾಗಿ, ನಮಗೆ ತಾಯಾಗಿ, ಒಡತಿಯಾಗಿ, ಪ್ರಾಪ್ಯಳಾಗಿರುವವಳು ಎಂಬುದಾಗಿ ಶ್ರೀಮಹಾಲಕ್ಷ್ಮಿಯನ್ನು ಭಾವಿಸಬೇಕು.

ಮೂಲ: ಸೃಷ್ಟಿಕಾಲತ್ತಿಲೇ, ಶರೀರಂಗಳೈಯುಂ, ಇಂದ್ರಿಯಂಗಳೈಯುಂ ತನ್ದು ಅಂತರ್ಯಾಮಿಯಾಯ್ ನಿನ್ರು, ಸತ್ತೈಯೈ ನೋಕ್ಕಿ, ಅದ್ವೇಷತ್ತೈಯುಂ, ಅಭಿಮುಖ್ಯತ್ತೈಯುಂ, ಸತ್ಸಂಗತಿ ತುಡಕ್ಕಮಾನ ಆತ್ಮಗುಣಂಗಳೈಯುಂ ಪಿರಪ್ಪಿತ್ತು, ಸದಾಚಾರ್ಯನೋಡೇ ಶೇರ್ತ್ತು, ನಮ್ಮುಡೈಯ ಸರ್ವಾಪರಾಂಧಂಗಳೈಯುಂ ಪೊರುತ್ತು, ಸಂಸಾರ ಸಂಬಂಧತ್ತೈಯುಂ ಕಳಿತ್ತು, ಅರ್ಚಿರಾದಿಮಾರ್ಗತ್ತೈಯುಂ, ಗುಣಾನುಭವವತ್ತೈಯುಂ ತನ್ದು, ಯಾವದಾತ್ಮಭಾವಿ ನಿತ್ಯಕೈಂಕರ್ಯಂ ಕೊಳ್ಳುಂ ಸ್ವಾಮಿ ಎನ್ರು ಸರ್ವೇಶ್ವರನೈ ನಿನೈಪ್ಪಾನ್.

ಕರಣ, ಕಳೇಬರಗಳಲ್ಲಿದೆ ರೆಕ್ಕೆ ಕಡಿದ ಪಕ್ಷಿಗಳ ಹಾಗೆ ಅಚಿತ್‌ನಂತೆ ಪ್ರಳಯ ಸಮುದ್ರದಲ್ಲಿ ಬಿದ್ದಿರುವ ಜೀವಾತ್ಮನನ್ನು ಕಂಡು ತನ್ನನ್ನು ಬಂದು ಸೇರುವುದಕ್ಕೆ ಅನುಕೂಲವಾಗುವಂತೆ, ಸೃಷ್ಟಿಕಾಲದಲ್ಲಿ ಶರೀರವನ್ನೂ, ಇಂದ್ರಿಯಗಳನ್ನು ನೀಡಿ, ಆ ಕರಣಕಳೇಬರಗಳು ಆತ್ಮನೊಡನೆ ಸೇರಿ ಕ್ರಿಯಾಶೀಲವಾಗುವುದಕ್ಕೆ ತಾನೂ ಒಳಗೆ ಪ್ರವೇಶಿಸಿ ಅಂತರ್ಯಾಮಿಯಾಗಿ, ಆತ್ಮನಿಗೆ ಇರುವಿಕೆಯನ್ನು ಉಂಟುಮಾಡಿ, ಪರಮಾತ್ಮನಾದ ತನ್ನ ವಿಷಯದಲ್ಲಿ ಈ ಆತ್ಮಗಿದ್ದ ದ್ವೇಷವನ್ನು ಹೋಗಲಾಡಿಸುವ ಮೂಲಕ ದ್ವೇಷವನ್ನು ಅವನ ವಿಷಯದಲ್ಲಿ ಪ್ರೇಮವನ್ನೂ, ಸತ್ಸಂಗತಿ ಮೊದಲಾದ ಆತ್ಮಗುಣಗಳನ್ನು ಉಂಟುಮಾಡಿ, ಸದಾಚಾರ್ಯನೊಡನೆ ಸೇರಿಸಿ, ನಮ್ಮ ಸರ್ವಾಪರಾಧಗಳನ್ನೂ ಕ್ಷಮಿಸಿ, ಸಂಸಾರ ಸಂಬಂಧವನ್ನು ಕಡಿದು, ಪ್ರಕಾಶಮಾನವಾಗಿ ವೈಭವೋಪೇತವಾದ ಮುಕ್ತನು ಪ್ರಯಾಣಿಸುವ ಸತ್ಕಾರಪೂರ್ಣವಾದ ಅರ್ಚಿರಾದಿಮಾರ್ಗವನ್ನೂ, ತನ್ನ ಸಮಸ್ತಗುಣಾನುಭವವನ್ನೂ ನೀಡಿ, ಈ ಆತ್ಮ ಇರುವವಪರ್ಯಂತ

ನಮ್ಮಿಂದ ನಿತ್ಯಕೈಂಕರ್ಯವನ್ನು ಸ್ವೀಕರಿಸುವ ಸ್ವಾಮಿ ಎಂಬುದಾಗಿ ಆ ಸರ್ವೇಶ್ವರನನ್ನು ಭಾವಿಸಬೇಕು.

ಈ ರೀತಿ ಒಂಭತ್ತು ವಿಷಯಗಳನ್ನು ನಾವು ಭಾವಿಸಬೇಕಾದ ಪ್ರಕಾರವನ್ನು ನಿರೂಪಿಸಲಾಯಿತು. ಈ ಒಂಭತ್ತು ಜ್ಞಾನರತ್ನಗಳಿಂದ ಅಲಂಕೃತನಾದ ಜೀವಾತ್ಮ ಆ ಪರಮಾತ್ಮನಿಗೆ ಅತ್ಯಂತ ಪ್ರಿಯನಾಗಿ ನಿತ್ಯಕೈಂಕರ್ಯ ಪ್ರಾಪ್ತಿಯನ್ನು ಪಡೆದು ಉಜ್ಜೀವಿಸುತ್ತಾನೆ.

॥ ನವರತ್ನಮಾಲೈ ಸಂಪೂರ್ಣಂ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಸ್ವಾಮಿ ಪಿಳ್ಳೈ ಲೋಕಾಚಾರ್ಯರ್ ತಿರುವಡಿಹಳೇ ಶರಣಂ ॥

॥ ಜೀಯರ್ ತಿರುವಡಿಹಳೇ ಶರಣಂ ॥

# ಸ್ವಾಮಿ ಪಿಳ್ಳೈ ಲೋಕಾಚಾರ್ಯರು

(ಜೀವನ -ಸಾಧನೆ-ಗ್ರಂಥ - ವಿಶೇಷ ವಿವರಗಳ ಸಂಗ್ರಹ)

ಹೆಸರು:- ಪಿಳ್ಳೈ ಲೋಕಾಚಾರ್ಯ, ದ್ವಿತೀಯ ಲೋಕಾಚಾರ್ಯ, ಕುಮಾರ ಲೋಕಾಚಾರ್ಯ, ಲೋಕಾರ್ಯ, ಜಗದ್ಗುರು, ಭುವನದೇಶಿಕರ್, ಪಿಳ್ಳೈ ಉಲಹಾರಿಯನ್, ಮುಡುಂಬೈ ಉಲಘಾಶಿರಿಯನ್, ಉಲಹಾರಿಯನ್, ಮುಡುಂಬೈ ಇರೈವನ್, ಇತ್ಯಾದಿ.

ಬಿರುದು :- 'ಸರ್ವಜ್ಞ ಭಟ್ಟರ್', 'ಉಭಯವೇದಾಂತನಿರ್ವಾಹಕರ್''.

ವರ್ಣನೆ :- ಅತಿಸ್ನಿಗ್ಧಕೃಷ್ಣವರ್ಣಃ, ಸುಂದರಾಂಗಃ, ವ್ಯೂಢೋರಸ್ಕಃ, ವೃಷಸ್ಕಂದಃ, ಸಾಲಪ್ರಾಂಶುಃ, ಮಹಾಭುಜಃ, ವಿಶಾಲಫಾಲಃ, ಉನ್ನಸಃ, ಸ್ಮಿತವದನಃ, ಸರಲಭ್ರೂಃ, ವಿಭಕ್ತಚಿಬುಕಃ, ಅಲೌಕಿಕಸಾಕ್ಷಾತ್ಕಾರಶಾಲಿ ಸ್ಥಿರ ಸೌಮ್ಯಲೋಚನ ತ್ರಾಟಕಃ, ಗೋಷ್ಪದ ಪರಿಮಾಣ ಪಶ್ಚಾಚ್ಛಿಖಃ ಕ್ವಚಿತ್ ಪೂರ್ವಾಚಾರ್ಯ ಧೃತತ್ಯಕ್ತ ಪಟ್ಟವಸ್ತ್ರಕೃತ ''ಪ್ರಪನ್ನಮುಡಿ'' ನಾಮಕ ರಮಣೀಯ ದಿವ್ಯೋಷ್ಣಿಷ ವೇಷ್ಟಿತಶೀರ್ಷಃ, ಪವಿತ್ರಸೂತ್ರ, ತುಳಸೀಮಣಿ ಪದ್ಮಾಕ್ಷ ಮಾಲಾಲಂಕೃತಃ, ಶುಭ್ರಯಜ್ಞೋಪವೀತ ದ್ವಯಃ, ಬ್ರಹ್ಮಸ್ಥಾನಸಂಗತಲಲಾಟಾದಿ ದ್ವಾದಶಮುಖ್ಯಸ್ಥಾನರಚಿತ ದೀಪ ಜ್ವಾಲಾಕಾರ ಶ್ರೀಚೂರ್ಣರೇಖಾಲಂಕೃತಮಧ್ಯ ಸರಳ ಶ್ವೇತಮೃಣ್ಮಯ ದಿವ್ಯ ದ್ವಾದಶೋರ್ಧ್ವಪುಂಡ್ರಃ, ದರ್ಭಪವಿತ್ರಾಂಗುಳಿಃ, ಜ್ಞಾನಮುದ್ರಾಂಚಿತ ದಕ್ಷಿಣ ಹಸ್ತಃ, ಧ್ಯಾನಮುದ್ರಾಂಚಿತ ವಾಮಹಸ್ತಃ, ಪಾಟಲಾಂಚಲಾಂಚಿತ ಶುಭ್ರಶ್ವೇತ ವಸ್ತ್ರ ವಿರಚಿತ ಪಂಚಕಚ್ಛ ರುಚಿರಾಂಚರೀಯಃ, ವಲಗ್ನ ಸಂವೀತ ಪೀತಾಂಬರೋತ್ತರೀಯಃ, ಸಿದ್ಧ ಪದ್ಮಾಸನೋಪವಿಷ್ಟಃ, ಗೂಢಗುಲ್ಫಃ, ಸುಂದರ ಚರಣಾರವಿಂದಃ.

ವರ್ಣನೆ : ಚನ್ನಾಗಿ ಹೊಳೆಯುವ ಕಪ್ಪು ಬಣ್ಣ, ಸುಂದರಾಂಗ, ಬಿಗಿಯಾದ ವಿಶಾಲವಾದ ಎದೆ, ಉಬ್ಬಿದ ಭುಜ, ತೇಗದ ಮರದಂತೆ ಉನ್ನತ, ಉದ್ದವಾದ ತೋಳು, ಅಗಲವಾದ ಹಣೆ, ಎತ್ತರವಾದ ಉದ್ದದ ಮೂಗು, ನಗುಮುಖ, ಸರಳವಾದ ಹುಬ್ಬುಗಳು, ಎರಡು ಭಾಗವಾಗಿ ಕಾಣಿಸುವ ಗಡ್ಡ, ದಿವ್ಯವಾದ ಯಾವುದನ್ನೋ ನೋಡುತ್ತಿರುವಂತಹ ಸ್ಥಿರವೂ ಸೌಮ್ಯವೂ ಆದ ಕಣ್ಣುಗುಡ್ಡೆಗಳು, ತಲೆ ಹಿಂಭಾಗದಲ್ಲಿ ಹಸುವಿನ ಗೊರಸಿಷ್ಟಗಲದ ಜುಟ್ಟು, ಕೆಲವು ಪ್ರವಚನಾದಿ ಸಂದರ್ಭಗಳಲ್ಲಿ 'ಪ್ರಪನ್ನಮುಡಿ' ಎಂಬ ಪೇಟ. ಇದು ಪೂರ್ವಾಚಾರ್ಯರು ಧರಿಸಿ ಅನುಗ್ರಹಿಸಿದ ರೇಷಿಮೆ ವಸ್ತ್ರದಿಂದ ಮಾಡಿದ್ದು. ಅರಿಶಿನ ನೂಲಿನ ಪವಿತ್ರ ಮಾಲೆ ತುಳಸೀಮಣಿಮಾಲೆ ತಾವರೆ ಮಣಿ ಮಾಲೆಗಳಿಂದ ಅಲಂಕೃತವಾದ ವಕ್ಷಸ್ ಸ್ಥಳ. ಬೆಳ್ಳಗಿರುವ ಶುದ್ಧವಾದ ಎರಡು ಜನಿವಾರಗಳು. ಬ್ರಹ್ಮಸ್ಥಾನವೆಂಬ ಮೂಗಿನ ಬುಡದೊಡನೆ ಸೇರಿದಂತೆ ನೆತ್ತಿಯಲ್ಲೂ ಉಳಿದ ಹನ್ನೊಂದು ಉಚಿತ ಸ್ಥಾನಗಳಲ್ಲೂ ಮಧ್ಯೆ ದ್ವೀಪಜಾಲಾಕರವಾದ ಶ್ರೀಚೂರ್ಣರೇಖೆಯಿಂದ ಅಲಂಕೃತವಾದ ಸರಳಶ್ವೇತ ಮೃತ್ತಿಕೆಯ ಲೇಪನದಿಂದಾದ ಭಗವತ್ ಪಾದದ್ವಯಾಕಾರವಾದ ಹನ್ನೆರಡು ಊರ್ಧ್ವಪುಂಡ್ರನಾಮಗಳು. ದರ್ಭ ಪವಿತ್ರ ಬಲ ಉಂಗುರದ ಬೆರಳಲ್ಲಿ. ಜ್ಞಾನಮುದ್ರೆ ಬಲಗೈಯಲ್ಲಿ. ಧ್ಯಾನಮುದ್ರೆ ಎಡಗೈಯಲ್ಲಿ. ಅತಿ ಕೆಂಪಲ್ಲದ ಸಾದಾ ಕೆಂಪಂಚಿನ ಬಿಳೀ ನೂಲು ವಸ್ತ್ರದಿಂದ ಹಾಕಿಕೊಂಡಿರುವ ಪಂಚಕಚ್ಚೆಯ ಉಡುವ ವಸ್ತ್ರ, ಸೊಂಟಕ್ಕೆ ಬಳಸಿ ಕಟ್ಟಿರುವ ಪೀತಾಂಬರದ ಉತ್ತರೀಯ ವಸ್ತ್ರ. ಸಿದ್ಧಪದ್ಮಾಸನವೆಂಬ ಯೋಗಾಸನದಲ್ಲಿ ಕುಳಿತಿರುವಿಕೆ. ಕಾಲುಗಿಣ್ಣುಗಳು ಕಾಣದಂತಿವೆ. ಸುಂದರವಾದ ತಾವರೆ ಹೂಗಳಂತೆ ಕೆಂಪಾದ ಅಂಗಾಲಿಂದ ರಂಜಿಸುವ ಪಾದಗಳು.

ಕುಲಗೋತ್ರಾದಿ :- ವಡಮಕುಲ, ಮುಡುಂಬೈವಂಶ, ಶ್ರೀವತ್ಸಗೋತ್ರ, ಆಪಸ್ತಂಬಸೂತ್ರ, ಕೃಷ್ಣಯಜುರ್ವೇದ ತೈತ್ತಿರೀಯಶಾಖೆ.

ಬಂಧುಮಿತ್ರರು :- ಮೂಲಪುರುಷ - ಭಗವದ್ ರಾಮಾನುಜರ 74 ಪೀಠಾಧಿಪತಿಗಳಲ್ಲಿ ಒಬ್ಬರಾದ ಶ್ರೀವತ್ಸಪೂರ್ಣ = ಮುಡುಂಬೈನಂಬಿ -

ವರದಾಚಾರ್ಯರ್. ಇವರಿಗೆ ''ಕೀಳಿರಂಡುರುವರಿವುಳ್ಳಡಿ'' ಎಂದು ಪ್ರಸಿದ್ಧಿ. ತಾತ-ಮುಡುಂಬೈ ನಂಬಿಯ ಪುತ್ರರಾದ ರಾಮಾನುಜ ನಂಬಿ 'ದ್ರಾವಿಡ ವೇದಾಂತ ದೇಶಿಕರ್'' ಎಂದು ಪ್ರಸಿದ್ಧರು. ಮಾತಾಮಹ – ತೂಪ್ಪುಲ್ ಉಯ್ಯಕ್ಕೊಂಡಾರ್. ತಂದೆ – ವಡಕ್ಕ್ತಿರುವೀದಿ ಪಿಳ್ಳೈ ಎಂಬ ಶ್ರೀ ಕೃಷ್ಣಪಾದರು. ತಾಯಿ – ಶ್ರೀರಂಗ ನಾಯಕಿ ಚಿಕ್ಕಪ್ಪ – ಮನ್ನಾರ್, ಚಿಕ್ಕಪ್ಪನ ಮಕ್ಕಳು – ಅಳಹಿಯಶಿಂಗರ್, ತೇವಪ್ಪೆರುಮಾಳ್, ತಿರುವೇಂಗಡಾಚಾರ್ಯರ್, ಸೋದರಮಾವ – ಅನಂತ ದೀಕ್ಷಿತರು. ತಮ್ಮ – ದ್ರಾವಿಡ ಬ್ರಹ್ಮಸೂತ್ರವೆನಿಸಿದ ''ಆಚಾರ್ಯ ಹೃದಯ'' ಮಹಾಗ್ರಂಥಕರ್ತರಾದ ಅಳಹಿಯಮಣವಾಳಪ್ಪೆರುಮಾಳ್ ನಾಯನಾರ್. ಸೋದರ ಮಾವನ ಮಗ – 'ತೂಪ್ಪುಲ್ ಪಿಳ್ಳೈ' ಎಂದು ಪ್ರಸಿದ್ಧರಾದ ವೇಂಕಟನಾಥ ವೇದಾಂತದೇಶಿಕರ್. ಆಚಾರ್ಯರು – ನಂಬಿಳ್ಳೈ ಎಂದು ಪ್ರಸಿದ್ಧರಾದ ಪ್ರಥಮಲೋಕಾರ್ಯರು. ವಿದ್ಯಾಗುರು – ತಂದೆ ಕೃಷ್ಣಪಾದರು ಮತ್ತು ಪೆರಿಯವಾಚ್ಚಾನ್ಪಿಳ್ಳೈ, ಶ್ರುತಪ್ರಕಾಶಿಕಾಚಾರ್ಯರ್, ಇತ್ಯಾದಿ. ಶಿಷ್ಯರು – ತಮ್ಮನಾದ ಅಳಹಿಯ ಮಣವಾಳ ಪ್ಪೆರುಮಾಳ್, ಕೋಟ್ಟೂರ್ ಅಳಹಿಯ ಮಣವಾಳ ಪ್ಪೆರುಮಾಳ್ ಪಿಳ್ಳೈ, ಕೂರಕುಲೋತ್ತಮದಾಸರ್, ತಿರುನಾವೀರುಡೈಯ ಪೀರಾನ್‌ತಾದರಣ್ಣರಯ್ಯನ್, ವಿಳಾಂ ಶೋಲೈಪ್ಪಿಳ್ಳೈ, ವಾದಿಕೇಸರಿ ಅಳಹಿಯ ಮಣವಾಳ ಜೀಯರ್, ತಿರುಪ್ಪುಳ್‌ಕುಳಿಜೀಯರ್, ತಿರುಕ್ಕಣ್ಣಂಗುಡಿಪ್ಪಿಳ್ಳೈ ಪೆರುಮಾಳ್ ಕೋಯಿಲ್ ಕಿಡಾಂಬಿರಾಮಾನುಶ ಪ್ಪೆರುಮಾಳ್, ತಿರುನಾರಾಯಣಪುರಂ ತಿರುಮಲಾಚಾರ್ಯರ್, ಕೊಲ್ಲಿಕಾವಲ ದಾಸರ್, ಕೋಟ್ಟೆಯಿಲಣ್ಣನ್, ಈಯುಣ್ಣಿ ಅಳಹಿಯಮಣವಾಳ ಪ್ಪೆರುಮಾಳ್, ಮಣಲ್‌ಪಾಕ್ಕಂನಂಬಿ, ಪರಕಾಲ ನಲ್ಲಾನ್, ಈಯುಣ್ಣಿ ಪದ್ಮನಾಭ ಪ್ಪೆರುಮಾಳ್, ಶ್ರೀಶೈಲೇಶರೆಂಬ ತಿರುಮಲೈಯಾಳ್ವಾರ್ ಅಥವಾ ತಿರುವಾಯ್‌ಮೊಳಿಪಿಳ್ಳೈ, ಕೋಟ್ಟೂರಣ್ಣನ್, ಯದುಪತಿ, ಶ್ರೀನಿವಾಸಾಚಾರ್ಯರ್, ವರದಾಚಾರ್ಯರ್, ತಿರುವನಂತಪುರನಂಬಿ, ಗೋಪಣ್ಣನ್, ಕಂಪಣನ್, ಶಿಂಗಪ್ಪನ್, ಕಸ್ತೂರಿರಂಗನ್, ಇತ್ಯಾದಿ. ಪಿತೃವ್ಯವಂಶಸ್ಥರು – ಮುಡಂಬೈಯಾರ್, ಎರುಂಬಿಯಪ್ಪಾವಂಶಸ್ಥರ್ ಪ್ರತಿವಾದಿಭಯಂಕರ ಅಣ್ಣನ್‌ವಂಶಸ್ಥರ್, ಪಿಳ್ಳೈ ಲೋಕಂಜೀಯರ್ ವಂಶಸ್ಥರ್.

ಆರಾಧ್ಯದೈವ - ಉಭಯನಾಚ್ಚಿಯಾರ್ ಸಹಿತ, ಗರುಡ ಪೀಠಸಹಿತ, ಶ್ರೀರಂಗ ರಾಜರ್ (ಗೃಹಾರಾಧನೆ)

ಕಾಲ - ಅವತಾರ -ಸರ್ವಧಾರಿ ಸಂವತ್ಸರ ತುಲಾಮಾಸ ಶುಕ್ಲಪಕ್ಷ ಶ್ರವಣ ನಕ್ಷತ್ರ, ತಂದೆಯ 61ನೇ ವಯಸ್ಸು ಕ್ರಿ.ಶ. 1228 ನವೆಂಬರ್. ಗತಕಲಿ 4329 ಗತಶಾಲಿವಾಹನ ಶಕ 1150. ಪರಮಪದ - ಅಕ್ಷಯ ಸಂವತ್ಸರ ಮಿಥುನ ಜ್ಯೇಷ್ಠ ಶುದ್ಧ ದ್ವಾದಶೀ ತಿಥಿ. ಕ್ರಿ.ಶ. 1327 ಜೂನ್. ಜೀವಿತಾವಧಿ - 99 ವರ್ಷ. ತಂದೆ ಕೃಷ್ಣಪಾದರ ಅವತಾರ ಕ್ರಿ.ಶ. 1168 ಸರ್ವಜಿತ್ ಸಂವತ್ಸರ ಮಿಥುನಮಾಸ ಸ್ವಾತೀನಕ್ಷತ್ರ, ಪರಮಪದ. ಕ್ರಿ.ಶ. 1265 ರುಧಿರೋದ್ಗಾರಿ ಸಂವತ್ಸರ. ಆಗ ಲೋಕಾಚಾರ್ಯರಿಗೆ 36 ವಯಸ್ಸು.

ದೇಶ - ಹುಟ್ಟೂರು ಮತ್ತು ವಾಸ - ತಮಿಳುನಾಡಿನ ಶ್ರೀರಂಗದಲ್ಲಿ ವಡಕ್ಕುತ್ತಿರುವೀದಿ. ಪರಮಪದಿಸಿದ್ದು - ಕರ್ಣಾಟಕದ ಬಂಡೀಪುರದ ಬಳಿ 'ಜ್ಯೋತಿಷ್ಕುಡಿ' ಎಂಬ ಗ್ರಾಮ. ದರೋಡೆಗಾರರಿಗೆ ಸಿಕ್ಕಿಬಿದ್ದುದು ಆಯ್‌ಕ್ಕುಡಿ= 'ಗೊಲ್ಲರ ಗುಡಿ' ಎಂಬ ಗ್ರಾಮ. ಇವರ ಮೂಲಪುರುಷರಿದ್ದ ಸ್ಥಳ - ಕಾಂಚೀಪುರದ ಬಳಿ ಮುಡುಂಬೈ ಎಂಬ ಪಟ್ಟಣ.

ಸಾಧನೆ - ಪಿತೃಹೃದಯ ಸಂತೋಷಾರ್ಥವಾಗಿ ಪರಮಭಾಗತೋತ್ತಮರಾದ ಭೀಷ್ಮ ಮತ್ತು ಆಂಜನೇಯರಂತೆ ನೈಷ್ಠಿಕ ಬ್ರಹ್ಮಚರ್ಯಸಿದ್ಧಿ, ತಮಿಳು ಸಾಂಪ್ರದಾಯಿಕ ಅನುಭವ ಸಾಹಿತ್ಯ, ವಿಪುಲ ವೇದಾಂತ ವಚನ ಸಾಹಿತ್ಯಗಳ ನಿರ್ಮಾಣ, ಮಾಯಾವಾದಿಗಳಾದ ನೀಲಕಂಠ ಶಿವಾಚಾರ್ಯರೆಂಬ ಮಿತ್ರರೊಡನೆ ವಿಚಾರವಾದ, ಸಂಸ್ಕೃತ ತಮಿಳು -ಮಿಶ್ರ ಮಣಿಪ್ರವಾಳ ಭಾಷೆಗಳಲ್ಲಿ ನೂರಾರು ಗ್ರಂಥ ರಚನೆ ಮತ್ತು ಸಚ್ಛಿಷ್ಯರ ಶಿಕ್ಷಣ, ಶ್ರೀರಂಗನಾಥ ದೇವಾಲಯದ ಕೈಂಕರ್ಯ ನಿರ್ವಹಣೆ, ಭಗವದ್ರಾಮಾನುಜರ ಪರಂಪರೆಯ ಉಭಯ ವೇದಾಂತ ಪ್ರವರ್ತನ, ತುರುಷ್ಕರ ಹಾವಳಿಯಲ್ಲಿ ಶ್ರೀರಂಗನಾಥನ ದಿವ್ಯ ಮಂಗಳ ವಿಗ್ರಹದ ರಕ್ಷಣಾಕಾರ್ಯದಲ್ಲಿ ದೇಹತ್ಯಾಗ ಇತ್ಯಾದಿ.

ವಿಶೇಷ - 1- ಇವರು ಕಂಚಿಯ ವರದರಾಜಸ್ವಾಮಿಯ ಅಪರಾವತಾರ. 2- ಪರಮಪದಿಸುವಾಗ ಪರಮಾತ್ಮನ ಸಾಕ್ಷಾತ್ಕಾರವಾಗಿ, ತನ್ನ ಸಮೀಪದಲ್ಲಿದ್ದ ಮನುಷ್ಯರಿಗೂ, ಪ್ರಾಣಿಗಳಿಗೂ, ಕಟ್ಟಿರುವೆ ಮುಂತಾದ ಹುಳುಹುಪ್ಪಟೆಗಳಿಗೂ ಮೋಕ್ಷಪ್ರಾಪ್ತಿಯೋಗ್ಯತೆಯುಂಟಾಗುವಂತೆ ಕರಸ್ಪರ್ಶದಾನ. 3- ಶಬ್ದ ಸೂತ್ರ ಬ್ರಹ್ಮಸೂತ್ರ ರಹಸ್ಯಸೂತ್ರಗಳನ್ನು ಅನುಗ್ರಹಿಸಿದ ಅನೇಕ ಆಚಾರ್ಯರಲ್ಲಿ ಶ್ರೇಷ್ಠರಾದವರು ಕ್ರಮವಾಗಿ ಮೂವರು :- ಪಾಣಿನಿ, ಪಾರಾಶರ್ಯ; ಪಿಳ್ಳೈ ಲೋಕಾಚಾರ್ಯ. ಈ ತ್ರಿಮುನಿಗಳ ಸೂತ್ರಗಳಿಗೂ ಸಾಕ್ಷಾತ್ ಆದಿಶೇಷನ ಅವತಾರವೆನಿಸಿದ ಪತಂಜಲಿ - ಭಗವದ್ ರಾಮಾನುಜ - ವರವರಮುನಿಗಳು ಕ್ರಮವಾಗಿ ಭಾಷ್ಯಕಾರರು ಎಂಬುದು ಒಂದು ದಿವ್ಯಭಾವನೆ. 4- ಮೈಸೂರು ಜಿಲ್ಲೆಯ ತೆರಕಣಾಂಬಿಯಲ್ಲಿ ಇವರು ವಾಸವಿದ್ದು ನಾನಾದಿವ್ಯದೇಶಗಳ ದೇವಮೂರ್ತಿಗಳನ್ನು ರಕ್ಷಿಸಿದ್ದ ಕಾರಣ ಇಲ್ಲಿಯ ವರದರಾಜ ದೇವರ ಸನ್ನಿಧಿಯಲ್ಲಿ ನಮ್ಮಾಳ್ವಾರ್ ಮತ್ತು ಪಿಳ್ಳೈಲೋಕಾಚಾರ್ಯರ ಉನ್ನತ ವಿಗ್ರಹಗಳು ದ್ವಾರಪಾರ್ಶ್ವದಲ್ಲಿ ಪ್ರತಿಷ್ಠಿತವಾಗಿವೆ. 5- ತಿರುನಾರಾಯಣಪುರವಾದ ಮೇಲುಕೋಟೆಯಲ್ಲಿ ಕೆಲವು ಕಾಲ ಶ್ರೀರಂಗನಾಥನ ಉತ್ಸವ ವಿಗ್ರಹವು ಬಿಜಮಾಡಿಸಿದ್ದು ಆ ಸಮಯದಲ್ಲಿ ಪಿಳ್ಳೈ ಲೋಕಾಚಾರ್ಯರ ಪೆರಿಯ ತಿರುವಧ್ಯಯನೋತ್ಸವವನ್ನು ಅವರ ಶಿಷ್ಯರು ನಡೆಸಿರುವರು. ಇದನ್ನು ಜಟಾಯುಮಹಾರಾಜರಿಗೆ 'ಶ್ರೀರಾಮ ಲಕ್ಷ್ಮಣರು ಚರಮಕೈಂಕರ್ಯ ನೇರವೇರಿಸಿದಂತೆ ರಾಮಪ್ರಿಯರಾದ 'ಶ್ರೀರಂಗರಾಜ - ಸಂಪತ್ಕುಮಾರ ಇಬ್ಬರೂ ನೇರವೇರಿಸಿದರೆಂದು ಪೂರ್ವಾಚಾರ್ಯರ ಭಾವನೆ. 6- ಶ್ರೀರಂಗಾದಿ ದಿವ್ಯದೇಶ ದೇವಾಲಯಗಳಲ್ಲೆಲ್ಲಾ ಪಿಳ್ಳೈ ಲೋಕಾಚಾರ್ಯರ ಮೂಲ ಮತ್ತು ಉತ್ಸವ ವಿಗ್ರಹಗಳು ಪ್ರತಿಷ್ಠಿತವಾಗಿದ್ದು 10 ದಿವಸ ಅಥವಾ 3 ದಿವಸ ಇವರಿಗೆ ಉತ್ಸವ ವ್ಯವಸ್ಥೆ ಇದೆ. ಇದಕ್ಕಾಗಿ ಸಂಘ ಸಂಸ್ಥೆಗಳೂ ಇವೆ. ಇವರ ಪ್ರತಿಷ್ಠಾದಿಗಳಿಗೆ ಆಗಮಾದಿ ಪ್ರಮಾಣಾಧಾರಗಳನ್ನು ಮೇಲುಕೋಟೆಯ ಯತಿರಾಜಮಠದ ವೇದಾಂತಿ ರಾಮಾನುಜಯತೀಂದ್ರರು 500 ವರ್ಷಗಳ ಹಿಂದೆಯೇ ತಮ್ಮ

'ದಿವ್ಯಸೂರಿ ಪ್ರಭಾವ ದೀಪಿಕೆ'ಯಲ್ಲಿ ವೇದಾಂತ ದೇಶಿಕರ ವಿವರಣೆಗಳ ಮೂಲಕ ನಿರೂಪಿಸಿದ್ದಾರೆ. ಹಸ್ತಿಗಿರಿ ಮಾಹಾತ್ಮ್ಯದಲ್ಲಿರುವ ವರದರಾಜಾಷ್ಟೋತ್ತರ ಶತನಾಮಗಳಿಂದಲೇ ಇವರಿಗೆ ಅರ್ಚನೆ ಮಾಡುವುದು ಸಂಪ್ರದಾಯ.

ಕೃತಿಗಳು - 1- ಅಷ್ಟಾದಶ ರಹಸ್ಯಗಳು ಪ್ರಸಿದ್ಧವಾಗಿ ಮುದ್ರಿತವಾಗಿವೆ.

''ಆದಿಯಿರಂಡುಂ, ತಾದಿಯುಮ್ಮೈನ್ದುಂ, ನಾದಿಯಿರಂಡುಂ, ಪಾದಿಯುಮೂನ್ರುಂ. ಮಾದಿಯುಮೊನ್ರುಂ, ಯಾದಿಯುಮೊನ್ರುಂ, ಶಾದಿರಂಡುಂ, ಸಾದಿಯಿರಂಡುಂ.''

| | | |
|---|---|---|
| ಅರ್ಚಿರಾದಿ, | ಅರ್ಥಪಂಚಕಂ, | ತತ್ವತ್ರಯಂ, |
| ತತ್ವಶೇಖರಂ, | ತನಿಚರಮಂ, | ತನಿದ್ವಯಂ, |
| ತನಿಪ್ರಣವಂ, | ನವರತ್ನಮಾಲೈ, | ನವವಿಧಸಂಬಂಧಂ, |
| ಪರಂದಪಡಿ, | ಪಪ್ರನ್ನಪರಿತ್ರಾಣಂ, | ಪ್ರಮೇಯ ಶೇಖರಂ, |
| ಮುಮುಕ್ಷುಪ್ಪಡಿ, | ಯಾದೃಚ್ಛಿಕಪ್ಪಡಿ, | ಶ್ರಿಯಃಪತಿಪ್ಪಡಿ, |
| ಶ್ರೀವಚನಭೂಷಣಂ, | ಸಂಸಾರ ಸಾಮ್ರಾಜ್ಯಂ, | ಸಾರಸಂಗ್ರಹಂ. |

ಇವುಗಳಲ್ಲಿ ತನಿಪ್ರಣವವನ್ನೂ ಸಂಸಾರ ಸಾಮ್ರಾಜ್ಯವನ್ನೂ ಬಿಟ್ಟು ತನಿತ್ತಿರು ಮಂತ್ರವನ್ನೂ ಸಾರಾರ್ಥಚತುಷ್ಟಯವನ್ನೂ ಸೇರಿಸುವುದುಂಟು.

2 ಇತರ ಅನುಪಲಬ್ಧರಹಸ್ಯಗಳು : 1. ತನಿತ್ತಿರುಮಂತ್ರಂ 2 ನಾಲುವಾರ್ತೈ, 3. ಸಾರಾರ್ಥಚತುಷ್ಟಯಂ, 4-5-6. ತತ್ವತ್ರಯವಿವರಣಂ :- ಶಿರುಪ್ಪಡಿ, ನಡುಪ್ಪಡಿ, ಪೆರಿಯಪಡಿ, 7. ತತ್ವ ಮಣಿಮಾಲಿಕ್ಕೈ, 8-108 ರಹಸ್ಯಂ, 9-108 ತಿರುಪತಿ ಪದ ಪ್ರಬಂಧಂ (ಪದ್ಯಗ್ರಂಥ) ಇತ್ಯಾದಿ.

3. ಸ್ತೋತ್ರಗಳು : (ಉಪಲಬ್ಧ) 1. ರಂಗೇಶವಿಂಶತಿಃ (ಮುದ್ರಿತ) ಶ್ರೀರಂಗಪಟ್ಟಣದ ದೇವಾಲಯದಲ್ಲಿ ಬಳಕೆಯಲ್ಲಿದೆ. 2. ಯದುಶೈಲೇಶದಶಕಂ

(ಅಮುದ್ರಿತ) ಮೇಲುಕೋಟೆ ದೇವಾಲಯದಲ್ಲಿ ಬಳಕೆಯಲ್ಲಿದೆ. ತೆಲುಗುಲಿಪಿಯಲ್ಲಿ ಮುದ್ರಿತವಾಗಿರುವ ಮತ್ತೊಂದು ಯದುಶೈಲೇಶದಶಕವು ಅಪ್ರಾಮಾಣಿಕ. ಅದು ಚಿಕ್ಕದೇವರಾಜರ ಪ್ರಧಾನ ತಿರುಮಲಾರ್ಯರ ಗ್ರಂಥಗಳಿಂದ ಕಿತ್ತು ಜೋಡಿಸಿರುವುದಾಗಿ ಸ್ಪಷ್ಟ. 3. ಮಹಾಲಕ್ಷ್ಮೀ ಸ್ತವಃ .- ರಮಾಸ್ತವಃ (ಅಮುದ್ರಿತ) 4. ಪ್ರಸಿದ್ಧವಾದ ಸುದರ್ಶನ ಷಟ್ಕ ಅನುಷ್ಟುಪ್ ಸ್ತೋತ್ರವನ್ನು ಲೋಕಾಚಾರ್ಯರದೆಂದು ಕೆಲವರು ಹೇಳುತ್ತಾರೆ.

4. ಸ್ತೋತ್ರಗಳು : (ಅನುಪಲಬ್ಧ) 1 ಮುಕುಂದಶತಕಂ; 2. ವೇಂಕಟೇಶಸ್ತವಃ, 3. ದೇವರಾಜಸ್ತವಃ, 4. ಕ್ಷಮಾಸ್ತವಃ, 5. ಸುದರ್ಶನ ವಿಂಶತಿಃ, 6. ಗರುಡವಿಂಶತಿಃ, 7. ಸೇನೇಶಾಷ್ಟಕಂ, 8. ಶಠಾರಿ ಷಟ್ಪಂಚಾಶತ್, 9. ಪರಕಾಲ ವಿಂಶತಿಃ, 10. ನಾಥಯೋಗಿ ದಶಕಂ, 11. ರಾಮಾನುಜ ಪಂಚಾಶತ್, (ಶ್ರೀ ಭಾಷ್ಯಾಕಾರ ಪಂಚಾಶತ್) 12. ದಿವ್ಯಸೂರಿಸ್ತವಃ, 13. ಅಷ್ಟೋತ್ತರ ಶತಸ್ಥಲಭಗವದ್ ದಿವ್ಯ ವಿಗ್ರಹಾನುಭವಸ್ತವಃ ಇತ್ಯಾದಿ.

5. ವ್ಯಾಖ್ಯಾನಗಳು : (ಅನುಪಲಬ್ಧ) 1. ಭಗವದ್ವಿಷಯ ಅರುಂಪದ ವ್ಯಾಖ್ಯಾನಂ, 2. ಶ್ರೀ ಭಾಷ್ಯ ವ್ಯಾಖ್ಯಾನ ದೀಪಃ 3. ಗದ್ಯತ್ರಯ ವ್ಯಾಖ್ಯಾನಂ 1) ಶಿರಿಯ ಪಡಿ 2) ಪೆರಿಯಪಡಿ. 5. ಸ್ತೋತ್ರರತ್ನವ್ಯಾಖ್ಯಾನಂ, 6-7-8-9-10 ಪಂಚಸ್ತವೀ ವ್ಯಾಖ್ಯಾನಂ 11. ಶ್ರೀರಂಗರಾಜಸ್ತವವ್ಯಾಖ್ಯಾನಂ. 12. ಶ್ರೀ ಗುಣರತ್ನಕೋಶ ವ್ಯಾಖ್ಯಾನಂ. 13. ಅಷ್ಟಶ್ಲೋಕೀ ವ್ಯಾಖ್ಯಾನಂ 14. ಛಾಂದೋಗ್ಯ ಭಾಷ್ಯಂ, 15. ಶ್ರೀರಾಮಾಯಣ ವ್ಯಾಖ್ಯಾನಂ (ಇದುಲಂಡನ್ ಲೈಬ್ರರಿಯಲ್ಲಿದೆಯಂತೆ) ಇತ್ಯಾದಿ.

6. ವಾದ ಗ್ರಂಥಗಳು : (ಅನುಪಲಬ್ಧ) 1. ಮಾಯಾವಾದ ಖಂಡನಂ 2. ಶ್ರೀ ಭಾಷ್ಯ ವಿಜಯಃ, 3. ವೇದಾಂತ ಭೂಷಣಂ 4. ವೇದಾಂತಾದರ್ಶಃ

7. ಇತರಲಘುಕೃತಿಗಳು : (ಉಪಲಬ್ಧ) 1. ಹಲವು ಸಂಸ್ಕೃತ ಮುಕ್ತಕ ಪದ್ಯಗಳು 2. ತಮಿಳು ತನಿಪ್ಪಾಶುರುಗಳು 3. ಸಾಮಯಿಕ ವಾರ್ತೆಗಳು. ಇವುಗಳಲ್ಲಿ ಕೆಲವು ಪ್ರಕಟಿತ ಕೆಲವು ಅಪ್ರಕಟಿತ.

8. ಕೃತಿಗಳ ಉಪದೇಶ ಪರಂಪರೆ : ಮುಮುಕ್ಷುಪ್ಪಡಿ, ತತ್ತ್ವತ್ರಯ, ಶ್ರೀ ವಚನಭೂಷಣ ಎಂಬ ಮೂರು ಗ್ರಂಥಗಳು ಮಾತ್ರ ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಉಪದೇಶ ಸಂಪ್ರದಾಯ ವ್ಯಾಖ್ಯಾನ ಕಾಲಕ್ಷೇಪಗಳಲ್ಲಿ ಅವಿಚ್ಛಿನ್ನವಾಗಿ ಉಳಿದು ಬೆಳೆದು ಬಂದಿವೆ. ಉಳಿದ ಮುದ್ರಿತ 15 ರಹಸ್ಯಗಳು ಹೀಗಲ್ಲ. ಪಿಳ್ಳೈ ಲೋಕಾಚಾರ್ಯರ ತಿರುಮಾಳಿಗೈಯ ಶಿಥಿಲಗಳಲ್ಲಿ ಅಳಿದುಳಿದ ಇವುಗಳ ತಾಳೆಗರಿ ಗ್ರಂಥಗಳನ್ನು ನೂರುವರ್ಷಗಳ ನಂತರ ಮಣವಾಳಮಾಮುನಿಗಳು ತೆಗೆಸಿ ಸಿಕ್ಕಿದಷ್ಟೆ ಪ್ರಕಾಶಪಡಿಸಿಕಾಪಾಡಿದರಂತೆ.

9. ಕೃತಿವ್ಯಾಖ್ಯಾನಗಳು : ಶ್ರೀ ವಚನ ಭೂಷಣಕ್ಕೆ ತಿರುನಾರಾಯಣಪುರ ಆಯಿಸ್ವಾಮಿಗಳ ವ್ಯಾಖ್ಯಾನವೇ ಈಗ ಪ್ರಾಚೀನವಾದುದು. ಇದು ಮುದ್ರಿತ. ಮಣವಾಳ ಮಾಮುನಿಗಳ ವ್ಯಾಖ್ಯಾನವು ಪ್ರಸಿದ್ಧ, ಇದಕ್ಕೆ ತಿರುಮಳಿಶೈ ವೀರ ರಾಘವ ಸೂರಿಯವರ ಅರುಂಪದ, ಶುದ್ಧಸತ್ವ ಮಹಾಚಾರ್ಯರ ಅರುಂಪದ. ಮಧುರ ಮಂಗಲಂ ಎಂಬಾರ್‌ಜೀಯರ ಅರುಂಪದ, ಕುನ್ನತ್ತೂರಯ್ಯನ (ಶಿಷ್ಯರಾದ) ಸಂಬಂಧವುಳ್ಳ ಕುಮಾಂಡೂರ್ ಇಳೈಯವಿಲ್ಲಿ ಎರುಂಬಿಲ್ ಕಂದಾಡೈ ವರದರಾಜ ದೇಶಿಕರ ಶ್ರೀವಚನ ಭೂಷಣಮಿಮಾಂಸಾಭಾಷ್ಯ, ಇತ್ಯಾದಿ ಶಾಸ್ತ್ರೀಯ ಸಾಂಪ್ರದಾಯಿಕ ವಿವರಣೆಗಳೂ ಮುದ್ರಿತವಾಗಿವೆ. ಅಮುದ್ರಿತವಾದ ಹಲವೂ ಇವೆ. ತಲಕಾಡಿನ ಶ್ರೀ ಶೈಲ ನಾರಾಯಣಾಚಾರ್ಯರೂ ಆಯಿಸ್ವಾಮಿಗಳ ಸಮಕಾಲದಲ್ಲಿ ಶ್ರೀವಚನ ಭೂಷಣಕ್ಕೆ ವ್ಯಾಖ್ಯಾನ ಮಾಡಿರುವುದಾಗಿ ತಿಳಿದುಬರುತ್ತದೆ.

10. ಅನುವಾದಗಳು : ಮೈಸೂರಿನ ಎಸ್.ಎನ್. ಜೋಸ್ಯರಿಂದ ಸಂಪಾದಿತವಾಗಿ ಮುದ್ರಣಕ್ಕೆ ಸಿದ್ಧವಾದ ಅಷ್ಟಾದಶರಹಸ್ಯಗಳ ಕನ್ನಡ ಅನುವಾದ 400 ವರ್ಷ ಹಿಂದೆ ಚಿಕುಪಾಧ್ಯಾಯರಿಂದ ಆಗಿದೆ. (ಅಪ್ರಕಟಿತ) ಕೆಲವು ರಹಸ್ಯಗಳು ವೃಂದಾವನದ ರಂಗಾಚಾರ್ಯಸ್ವಾಮಿಗಳಿಂದ ಸಂಸ್ಕೃತಕ್ಕೆ ಅನುವಾದವಾಗಿವೆ. (ಮುದ್ರಿತ) ಶ್ರೀ ವಚನಭೂಷಣ ಪದ್ಯರೂಪವಾಗಿ ನೂರು ವರ್ಷ ಹಿಂದೆಯೇ ಸಂಸ್ಕೃತದಲ್ಲಿ

ಪ್ರಕಟಿತವಾಗಿದೆ. ಇಂಗ್ಲಿಷ್-ಹಿಂದಿ ಅನುವಾದಗಳೂ ವ್ಯಾಖ್ಯಾನಗಳೂ ಆಗಿವೆ. ಹಿಂದೀ - ಪೂರಿಜನ್ನಾಥದ ಎಂಬಾರ್ ಮಠ ಪ್ರಕಾಶಿತ. ಇಂಗ್ಲಿಷ್-ಗ್ವಾಲಿಯರ್‌ನ ಸತ್ಯಮೂರ್ತಿಗಳಿಂದ ಪ್ರಕಾಶಿತ. ಪಿಳ್ಳೈಲೋಕಾಚಾರ್ಯರ ತತ್ವತ್ರಯ ಗ್ರಂಥವನ್ನು ಅಹೋಬಲಮಠದ ಎರಡನೆಯ ಪಟ್ಟದ ನಾರಾಯಣಮುನಿಗಳು ಸಂಸ್ಕೃತದಲ್ಲಿ ಅನುವದಿಸಿರುವರಲ್ಲದೆ ತಮ್ಮ ಪುರುಷಕಾರ ಮೀಮಾಂಸೆಯಲ್ಲಿ "ಅತಿಗಂಭೀರಸಂದರ್ಭಂ ಶ್ರೀ ಮದ್ವಚನ ಭೂಷಣಂ" ಎಂದು ಆಚಾರ್ಯರ ಗ್ರಂಥ ರತ್ನವನ್ನು ಮುಕ್ತಕಂಠದಿಂದ ಶ್ಲಾಘಿಸಿರುವರು. ತಿರುವಾಯ್‌ಮೊಳಿ ಆಚಾರ್ಯರ ಶಿಷ್ಯರಾದ ಬೇಲೂರಿನ ಕೋಗೋಡು ಕೃಷ್ಣಯ್ಯಂಗಾರ್ಯರು 100 ವರ್ಷಗಳ ಹಿಂದೆಯೇ ತತ್ವತ್ರಯವನ್ನು ಕನ್ನಡದಲ್ಲಿ ವಿವರಿಸಿ ಮುದ್ರಿಸಿರುವರು. ಈಚೆಗೆ ಜಗ್ಗುವಕುಳಭೂಷಣರ ಶ್ರೀವಚನಭೂಷಣ ಸಂಸ್ಕೃತ ಕನ್ನಡಾನುವಾದಗಳು ಉಭಯವೇದಾಂತ ಪ್ರವರ್ತನ ಸಭೆಯಿಂದ ಪ್ರಕಾಶಿತ.

ಆಚಾರ್ಯರ ವಿಷಯಕವಾದ ಕೃತಿಗಳು -

1) ತನಿಯನ್‌ಗಳು ಸಂಸ್ಕೃತ - ತಮಿಳು - ವಿವಿಧ ಶಿಷ್ಯಕೃತ, ಮುದ್ರಿತ

2) ವಾಳಿತ್ತಿರುನಾಮಪಾಶುರಗಳು - ವಿವಿಧ ಶಿಷ್ಯಕೃತ, ಮುದ್ರಿತ

3) ಏಳುಲಹಾರಿಯನ್ ಪಾ (ಮಣವಾಳ ಮಾಮುನಿಗಳ ಉಪದೇಶರತ್ನ ಮಾಲೆಯಲ್ಲಿ) ಮುದ್ರಿತ.

4) ಉಲಹಾರಿಯನಂದಾದಿ 108 ಪಾಶುರಗಳು ಅಳಹಿಯಮಣವಾಳ ನಾಯನಾರ್‌ಕೃತ, ಅಮುದ್ರಿತ

5) ಪಿಳ್ಳೈಲೋಕಾಚಾರ್ಯರ್ ತಿರುನಾಮಂ ತಿರುನಾರಾಯಣಪುರಂ ಅರೆಯರ್ ಸೇವೆಯಲ್ಲಿದೆ ಅಮುದ್ರಿತ

6) ಪಿಳ್ಳೈಲೋಕಾಚಾರ್ಯರ್ ತಿರುಮಂಜನಂ, ತಿರುನಾರಾಯಣಪುರಂ ಅರೆಯರ್ ಸೇವೆಯಲ್ಲಿದೆ. ಅಮುದ್ರಿತ

7) ಪಿಳ್ಳೈ ಲೋಕಾಚಾರ್ಯರ್ ಚರಿತ್ರಚ್ಚುರುಕ್ಕು. ಅಪ್ರಕಟಿತ

8) ಲೋಕಾಚಾರ್ಯ ಪಂಚಾಶತ್ 56 ಪದ್ಯಗಳು. ವೇದಾಂತದೇಶಿಕರ ಹೆಸರಿನಲ್ಲಿದೆ (ಪಾಠಾನ್ತರಗಳು ಅಪ್ರಕಟಿತ ) ತೆಲಗು-ಕನ್ನಡ-ದೇವನಾಗರಿಗಳಲ್ಲಿ ಮುದ್ರಿತ. ಮದ್ರಾಸ್, ಗೌರ್ನಮೆಂಟ್ ಲೈಬ್ರರಿ ನಂ. ಆರ್. 491-ಸಿ.

9) ಲೋಕಾಚಾರ್ಯಾಷ್ಟೋತ್ತರ ಶತನಾಮಸ್ತೋತ್ರಂ - ಜೀಯರ್‌ನಾಯನಾರ್ ಕೃತಿ. ಅಮುದ್ರಿತ.

10) ಲೋಕಾಚಾರ್ಯ ಪ್ರಪತ್ತಿಃ ಜೀಯರ್‌ನಾಯನಾರ್ ಕೃತಿ. ಮುದ್ರಿತ.

11) ಲೋಕಾಚಾರ್ಯ ಮಂಗಳಾಶಾಸನಂ ಜೀಯರ್ ನಾಯನಾರ್ ಕೃತಿ. ಮುದ್ರಿತ.

12) ಲೋಕಾಚಾರ್ಯ ಸ್ತೋತ್ರಗಳು -ಪ್ರ-ಅಣ್ಣಂಗರಾಚಾರ್ಯ ಕೃತ ಮುದ್ರಿತ.

13) ಲೋಕಾಚಾರ್ಯರ್ ಸ್ತೋತ್ರಗಳು ಇತರರ ಕೃತಿಗಳು. ಅಮುದ್ರಿತ-ಮುದ್ರಿತಸಹ

14) ಲೋಕಾಚಾರ್ಯರ ಬಗ್ಗೆ ಬಿಡಿ ಪದ್ಯಗಳು ಅಪ್ರಕಟಿತ. ಉದಾ :- ಎಂಬಾರ್ ನರಸಿಂಹಾಚಾರ್ಯರ ಪದ್ಯ :-

ಲೋಕನಾಥೋಽಪ್ಯಶಕ್ತೋಽಭೂತ್ ಯಸ್ಯ ಲೋಕಸ್ಯ ಶಿಕ್ಷಣೇ।

ತಲ್ಲೋಕಶಿಕ್ಷಣಪಟುಂ ಲೋಕಾಚಾರ್ಯಂ ತಮಾಶ್ರಯೇ ॥

ಆಚಾರ್ಯರ ಬಗ್ಗೆ ಚಾರಿತ್ರಿಕ ಕೃತಿಗಳು

1) ಭಗದ್ವಿಷಯ ತನಿಯನ್ ಪದ್ಯ ವ್ಯಾಖ್ಯಾನಗಳು, ಅರುಂಪದಗಳು.

2) ಯತೀಂದ್ರ ಪ್ರವಣ ಪ್ರಭಾವ (ಮೂರು ಪಾಠಗಳು) ಮತ್ತು ಸಂಸ್ಕೃತ ಹಿಂದಿ ಅನುವಾದಗಳು.

3) ಭದ್ರದೀಪ ಚಂಪೂಃ (ಅಮುದ್ರಿತ)

4) ಕೋಯಿಲ್ ಒಳುಹು.

5) ನಾಥಮುನಿ ವಿಜಯ ಚಂಪೂಃ (ಅಮುದ್ರಿತ)

6) ಶ್ರೀತತ್ವನಿಧಿ, ಮುಮ್ಮಡಿ ಕೃಷ್ಣರಾಜ ಸಂಗ್ರಹೀತ (ವಿಗ್ರಹವರ್ಣನ)

7) ಲೋಕಾಚಾರ್ಯ ಪ್ರತಿಷ್ಠಾ ಶಾಸನಗಳು (ಅಮುದ್ರಿತ)

8) ಲೋಕಾಚಾರ್ಯ ಪದ್ಯಗಳು (ಅಮುದ್ರಿತ)

9) ಪೆರಿಯ ತಿರುಮುಡಿ ಅಡ್ಶೈವು ಕಂದಾಡ್ಶೈ ಅಣ್ಣನ್ ಕೃತಿ (ಅಮುದ್ರಿತ)

10) ಪೆರಿಯ ತಿರುಮುಡಿ ಅಡ್ಶೈವು ಕಂದಾಡ್ಶೈ ನಾಯನ್ ಕೃತಿ (ಮುದ್ರಿತ)

11) ಪೆರಿಯ ತಿರುಮುಡಿ ಕನ್ನಡ ಅನುವಾದ (ಅಮುದ್ರಿತ)

12) ಪೆರಿಯ ತಿರುಮುಡಿ ಎರುಂಬಿ ಯಜ್ಞನಾರಾಯಣಕೃತ (ಅಮುದ್ರಿತ)

13) ಪಿಳ್ಳೈ ಲೋಕಾಚಾರ್ಯ (ಕನ್ನಡ-ಇಂಗ್ಲಿಷ್) ಭಾರತ ಭಾರತಿ ಪ್ರಕಾಶನ.

14) ಪ್ರಪನ್ನಾಮೃತ (ಮೂರು ನಾಲ್ಕು ಮುದ್ರಣ ಆಗಿದೆ) ಮಿರಲೆ ಸಾಲಿಗ್ರಾಮದ ಅನಂತಾರ್ಯರ ಕೃತಿ.

15) ಪ್ರಪನ್ನಾಮೃತ (ಕನ್ನಡ) ಹೈದರಾಲಿಯ ರಾಯಸದ ವೆಂಕಟಾಚಾರ್ಯರ ಮುದ್ರಿತ ಕೃತಿ ಮತ್ತು ವರದಾಚಾರ್ಯರ ಅಮುದ್ರಿತ ಕೃತಿ.

16) ಅಷ್ಟಾದಶ ಭೇದ ರಹಸ್ಯ ವಿವೇಕಃ (ಮುದ್ರಿತ) ಎರುಂಬಿ ಅಳಹಿಯ ಮಣವಾಳ ನಾಯನಾರ್ ಕೃತಿ.

17) ಇತರ ಅನೇಕ ಲೇಖನ-ಗ್ರಂಥ-ಇತ್ಯಾದಿ.

18) ಪಳನಡೈ ವಿಳಕ್ಕಂ.

19) ತ್ರಿಂಶತ್ ಪ್ರಶ್ನೋತ್ತರಂ.

20) ಯತಿವರ ಚಂಪೂಃ

21) ವರವರಮುನಿ ಚಂಪೂಃ

22) ವರವರಮುನಿ  ಚರಿತ ಕಾವ್ಯಂ.

23) ಶಿಂಗಪ್ಪಿರಾನ್ ಶೆಪ್ಪೋಡು.

24) ತೋಳಪ್ಪರ್ ತುಡಿವು.

25) ಕ್ಷಮಾವಿಂಶತಿಃ

26) ಶ್ರೀ ವೈಷ್ಣವ ಸಮಯಾಚಾರ ನಿಷ್ಕರ್ಷ.

27) ಪಿಳ್ಳೈ ಲೋಕಾಚಾರ್ಯ (ಇಂಗ್ಲಿಷ್) ಡಾಕ್ಟರೇಟ್ ಪ್ರಬಂಧ. ಎಂ.ಎನ್. ನರಸಿಂಹನ್.

ಇವರ ಅವತಾರತ್ತ ನಿಯನ್

'ಜ್ಞೇಶೋಪಾಯೇ' ಶಕಾಬ್ದೇ ವಿಬುಧವರಹಿತೇ ಸರ್ವಧಾರ್ಯಾಖ್ಯವರ್ಷೇ

ವಿಷ್ಣ್ವೃಕ್ಷೇ ಪೂರ್ವಪಕ್ಷೇ ಸವಿತರಿ ಚ ತುಲಾಂ ಸಾದರಂ ಸೇವಮಾನೇ।

ಶ್ರೀಮಾನ್ ಲೋಕಾರ್ಯವರ್ಯಃ ಶುಭಗುಣಜಲಧಿಃ ಕೃಷ್ಣಪಾದಾರ್ಯಪುತ್ರೋ

ಹಸ್ತ್ಯದ್ರೀಶಾವತಾರಸ್ಸಮಜನಿ ಸಕಲಾಮ್ನಾಯ ಸಂರಕ್ಷಣಾರ್ಥಮ್॥

:- ತಿರುಮುಡಿ ಅಡೈವು (ಯಜ್ಞನಾ)

ತುಲಾಯಾಂ ಶ್ರವಣೇ ಜಾತಂ ಲೋಕಾರ್ಯಮಹಮಾಶ್ರಯೇ
ಶ್ರೀಕೃಷ್ಣಪಾದತನಯಂ ತತ್ಪಾದಾಬ್ಜ ಸಮಾಶ್ರಯಮ್॥

:- ತಿರುಮುಡಿ ಅಡೈವು (ಕಂದಾಡೈ)

ಯಸ್ಯಸಾರಸ್ವತಂ ಶಾಸ್ತ್ರಂ ದಿವ್ಯಂ ವಚನಭೂಷಣಮ್।
ತಸ್ಮೈ ಹಸ್ತಿಗಿರೀಶಾಯ ಶ್ರೀ ಜಗದ್ಗುರುವೇ ನಮಃ॥

:- ಉತ್ತರಸೂರಿಚರಿತಂ (ಸಂಗ್ರಹ)

ನಿತ್ಯ ತನಿಯನ್

ಲೋಕಾಚಾರ್ಯಾಯ ಗುರುವೇ ಕೃಷ್ಣಪಾದಸ್ಯ ಸೂನವೇ।
ಸಂಸಾರ ಭೋಗಿಸಂದಷ್ಟ ಜೀವಜೀವಾತವೇ ನಮಃ॥

:- ಈಯುಣ್ಣಿ ಪದ್ಮನಾಭಪ್ಪೆರುಮಾಳ್ ಕೃತಿ

ಚರಮ ಶ್ಲೋಕಃ

ಅಕ್ಷಯಾಬ್ದೇ ಜ್ಯೇಷ್ಠಶುದ್ಧದ್ವಾದಶ್ಯಾಂ ಲೋಕದೇಶಿಕಃ।
ಜ್ಯೋತಿಷ್ಕುಟ್ಯಾಂತು ಚಿತ್ರಾಯಾಂ ಜೋತಿಶ್ಚಕ್ರಮಗಾತ್ ಪದಮ್॥

ಶ್ರೀವಚನಭೂಷಣತ್ತನಿಯನ್

ಆಕಂಠೋತ್ಕಂಠವೈಕುಂಠಪ್ರಿಯಾಣಾಂ ಕಂಠಭೂಷಣಂ।
ಗುರುಣಾ ಜಗತಾಮುಕ್ತಂ ವ್ಯಕ್ತಂ ವಚನಭೂಷಣಂ॥

ತಂದೆ ಕೃಷ್ಣಪಾದರ ತನಿಯನ್

ಶ್ರೀಕೃಷ್ಣಪಾದಪಾದಾಜ್ಜೇ ನಮಾಮಿ ಶಿರಸಾ ಸದಾ।
ಯತ್ಪ್ರಸಾದ ಪ್ರಭಾವೇನ ಸರ್ವಸಿದ್ಧಿರಭೂನ್ಮಮ॥

ಅವರ ಅವತಾರ ತನಿಯನ್

ಮಿಥುನೇ ಸ್ವಾತಿಸಂಜಾತಂ ಕಲಿವೈರಿಪದಾಶ್ರಿತಂ।
ಉದಕ್‌ಪ್ರತೋಳೀನಿಲಯಂ ಕೃಷ್ಣಪಾದಮಹಂ ಭಜೇ॥

ಮೂಲಪುರುಷ ಮುಡುಂಬೈನಂಬಿ ತನಿಯನ್

ಶ್ರೀಮದ್ರಾಮಾನುಜಾಚಾರ್ಯಶ್ರೀಪದಾಬ್ಜಮಧುವ್ರತಮ್।
ಶ್ರೀವತ್ಸಪೂರ್ಣಮನಘಂ ವಂದೇ ವರದಸಂಜ್ಞಕಮ್॥

ಪಿಳ್ಳೈಲೋಕಾಚಾರ್ಯರ ವಾಳಿತ್ತಿರುನಾಮಂ

ಅತ್ತಿಗ್ಗಿರಿ ಅರುಳಾಳರ್ ಅನುಮತಿಯೋನ್ ವಾಳಿಯೇ
ಅಲ್ಪಿಶಿಯಿಲ್ ತಿರುವೋಣತ್ತು ಅವತರಿತ್ತಾನ್ ವಾಳಿಯೇ
ಮುತ್ತಿನೆರಿಮರ್ರೈತ್ತಮಿಳಾಲ್ ಮೊಳಿನ್ದರುಳ್ವೋನ್ ವಾಳಿಯೇ
ಮೂದರಿಯ ಮಣವಾಳನ್ ಮುನ್ಬುದಿತ್ತಾನ್ ವಾಳಿಯೇ
ನಿತ್ತಿಯಂ ನಂಬಿಳ್ಳೈಪದಂ ನೆಂಜಿಲ್ ವೈಯ್‌ಪ್ಪೋನ್ ವಾಳಿಯೇ
ನೀಳ್‌ವಶನ ಭೂಷಣತ್ತಾಲ್ ನಿಯಮಿತ್ತಾನ್ ವಾಳಿಯೇ
ಉತ್ತಮಮಾಂ ಮುಡುಂಬೈನಹರ್ ಉದಿತ್ತವಳ್ಳಲ್ ವಾಳಿಯೇ
ಉಲಹಾಶಿರಿಯನ್ ಪದಂಗಳ್ ಊಳಿದೊರುಂ ವಾಳಿಯೇ

ಮಂಗಳಾಶಾಸನಮ್

ಪ್ರಣತಾರ್ತಿಹರಾಂಶಾಯ ಪ್ರಕೃಷ್ಟಗುಣಶಾಲಿನೇ.
ಲೀಲಯೋದ್ಧೃತಲೋಕಾಯ ಲೋಕಾರ್ಯಗುರವೇ ನಮಃ
ಶ್ರೀಮತೇ ಜಗದಾರ್ಯಾಯ ಕಲ್ಯಾಣಗುಣಶಾಲಿನೇ.
ಶ್ರೀರಂಗವಾಸಿನೇ ಭೂಯಾತ್ ನಿತ್ಯಶ್ರೀರ್ನಿತ್ಯಮಂಗಳಮ್.

ಇಂತು ಈ -

ವಿಭವಸಂ. ಮಕರಶುಕ್ಲ ಪುನರ್ವಸು — ವಿಜ್ಞಾಪಕ

21-1-1989 — ಆರೆಯರ್ ಶ್ರೀರಾಮಶರ್ಮ

# ನಮ್ಮ ಪ್ರಕಟಣೆಗಳು

೧) ತತ್ವತ್ರಯಂ (ವ್ಯಾಖ್ಯಾನದ ಕನ್ನಡ ಅನುವಾದ) — ಶ್ರೀಮತಿ ರಮಾಶ್ರೀನಿವಾಸನ್

೨) ಪ್ರಪನ್ನಪರಿತ್ರಾಣಂ(ಅನುವಾದ ಮತ್ತು ವ್ಯಾಖ್ಯಾನ) — ———— „ ————

೩) ನವವಿಧ ಸಂಬಂಧಂ — ———— „ ————

೪) ತಿಳಿಯಲೇಬೇಕಾದುದು — ———— „ ————

೫) ಕೈಶಿಕ ಪುರಾಣಮ್ (ಅನುವಾದ) — ———— „ ————

೬) ಘೇಂಕಿಣೀಪುರ ಮಹಾತ್ಮ್ಯಂ — ———— „ ————

೭) ಮುಮುಕ್ಷುಪ್ಪಡಿ (ವ್ಯಾಖ್ಯಾನದ ಕನ್ನಡ ಅನುವಾದ) — ———— „ ————

೮) ಅರ್ಥಪಂಚಕಮ್ (ಅನುವಾದ ಮತ್ತು ವ್ಯಾಖ್ಯಾನ) — ———— „ ————

೯) ಅನುಷ್ಠಾನ ದರ್ಶಿನೀ (ಮಂತ್ರಾರ್ಥ ವಿವರಣೆ) — ಶ್ರೀ ಉ॥ವೇ॥ ಘಂಟಿ ರುವೇಂಕಟಾಚಾರ್ಯ

೧೦) ಭಗವದ್ಗುಣ ವೈಭವಮ್ — ಶ್ರೀಮತಿ ಲಲಿತಮ್ಮ ರಾಜಯ್ಯಂಗಾರ್

೧೧) ದಿವ್ಯಪ್ರಬಂಧ ಕಿರಣ — ———— „ ————

೧೨) ವಿಮಾನಂ — ———— „ ————

೧೩) ಅಸ್ತುತೇ - ಸರ್ವಂ ಸಂಪತ್ಸ್ಯತೇ — ———— „ ————

೧೪) ಉಭಯವೇದಸುಧಾ ಸಮೀಕ್ಷೆ — ———— „ ————

೧೫) ಶ್ರೀರಂಗ ಮಹತ್ವಮ್ (ಅನುವಾದ) — ———— „ ————

# ಬರಲಿರುವ ಗ್ರಂಥಗಳು

೧) ಶ್ರೀವಚನ ಭೂಷಣಂ(ವ್ಯಾಖ್ಯಾನದ ಕನ್ನಡ ಅನುವಾದ) — ಶ್ರೀಮತಿ ರಮಾಶ್ರೀನಿವಾಸನ್

೨) ಅರ್ಚಿರಾದಿ (ಅನುವಾದ ಮತ್ತು ವ್ಯಾಖ್ಯಾನ) — ———— „ ————

೩) ತನಿಶ್ಲೋಕೀ (ವ್ಯಾಖ್ಯಾನದ ಕನ್ನಡ ಅನುವಾದ) — ———— „ ————